**ಅಲೀಕ**

೧) ಜ್ಞಾನಾ ವಿಷಯತ್ವಃ ಅಲೀಕ

**ಅಲೋಕ**

೧) ದೀಪಸೂರ್ಯಾದಿ ಪ್ರಕಾಶಕ್ಕೆ ಅಲೋಕವೆನ್ನುವರು.

**ಅವಯವ**

೧) ದ್ರವ್ಯ ಸಮುದಾಯಕಾರಣಂ ಅವಯವಃ

**ಅನಾವೃತ**

೧) (ವಿ.ಚಂ.ಪೇಜ ೪೩೫) (ವಿ.ಚಂ.೪೩೪) ಅವರಣಭಂಗ ಪದಾರ್ಥ ಅನಾವೃತ ಸರ್ವ (೨) ಥಾ ಆವರಣರಹಿತ ಅನಾವೃತ. ಕಹಿಯೆ ಹೈ

**ಅಪೂರ್ವ**

೧) (ವಿ.ಸಾ.೭೯) ಧರ್ಮ ಅಧರ್ಮಕ್ಕೆ ಅಪೂರ್ವವೆಂದು ಅದೃಷ್ಟವೆಂದೂ ಹೇಳುವರು ಮತ್ತು ಪುಣ್ಯ ಪಾಪವೆಂದೂ ಕೆಲವರು ಹೇಳುವರು.

೨) ಕರ್ಮಜನ್ಯ ಸಂಸ್ಥಾರರೂಪ ಅದೃಷ್ಟಕ್ಕೆ ಅಪೂರ್ವವೆನ್ನುವರು (ವೃ.ರ.೧೫೭)

**ಅವಭಾಸ:**

೧) ವಿಷಯ ವಿಷಯದ ಜ್ಞಾನ ಅಧ್ಯಾಸವೇ ಅವಭಾಸವೆನಿಸುವದು.

೨) (ವೃ.ರ.ಅಂಕ ೨೦೧) ಅಧಿಷ್ಠಾನಕಿ ಸತ್ತಾಸೆ ವಿಷ ಮಸತ್ತಾವಾಲಾ ಅವಭಾಸ ಕಹಿಯೆ ಹೈ। ಸರ್ಪ ತಾಕಾಜ್ಞಾನ ಅಧ್ಯಾಸ ಔರ ಅವಭಾಸ ಕಹೆ ಹೈ।

೩) (ವೃಪ್ರ.ಪ್ರ.೭ ಪೇಜ ೨೨೨) ಜ್ಞಾನಾ, ಜ್ಞಾನಕಾ ವಿಷಯಕು ಅವಭಾಸ ಕಹೆ ಹೈ.

**ಅಂಧ**

೧) ವಿಚಾರ ಹೀನಃ ಅಂಧಃ

೨) ನೇತ್ರದ್ವಯ ಹೀನಃ ಅಂಧಃ

**ಅಂಧ ಗೋಲಾಂ ಗುಲ ನ್ಯಾಯಃ**

೧) ಊರಿಗೆ ಹೋಗುವ ಮನುಷ್ಯ ಅಂದರೆ ಕುರುಡನು ಅಡವಿ ಆಕಳ ಬಾಲಹಿಡಿದರೆ ಅಡವಿಪಾಲಾಗಿ ದುಃಖ ಪಡುವಂತೆ ಅಜ್ಞಾನಿ ಮನುಷ್ಯ ತತ್ವಜ್ಞಾನವಿಲ್ಲದ ಗುರುವಿಗೆ ಶರಣಾಗತನಾದರೆ ಬವ ದುಃಖದಲ್ಲಿ ತೊಳಲುತ್ತಾನೆ ಮತ್ತು (ವಿ.ಸಾ.ಅಂಕ.೫೨೨ರಲ್ಲಿ ಸ್ಪಷ್ಟವಿದೆ)

**ಅಜಾತವಾದ**

(ವಿ.ಸಾ.ಟಿ.೩೫೬) ದೃಷ್ಟಿ ಅಂದರೆ ಅವಿದ್ಯಾದ ವೃತ್ತಿರೂಪಜ್ಞಾನ ಅದೇ ಸಮಯದಲ್ಲಿಯೇ ಸೃಷ್ಟಿ ಅಂದರೆ ಪ್ರಪಂಚದ ಉತ್ಪತ್ತಿ ಅದಕ್ಕೆ ಯಾವ ಕಥನವಿರುವದೋ ದೃಷ್ಟಿಸೃಷ್ಟಿವಾದ ಅದಕ್ಕೆ ಅಜಾತವಾದವೆನ್ನುವರು.

**ಅವಚ್ಛೇದಕ**

೧) (ವಿ.ಸಾ.ಅಂಕ ೨೦೩) ಅವಚ್ಛೇದಕ ಕಹಿಯೆ ವ್ಯಾವರ್ಥಕ ಕಹಿಯೆ ಔರ ಪದಾರ್ಥಸೆ ಬಿನ್ನ ತಾಕರಿಕೆ ವಸ್ತುಕಾ ಸ್ವರೂಪಕು ಜನಾವೆ ಸವ್ಯಾವರ್ತಕ ರಹಿಯೆ ಹೈ ತಾಹೀಕು ಅವಚ್ಛೇದಕ ಕಬೀ ಕಹೇ ಹೈ.

**ಅಚ್ಛಾದಕ**

೧) ತೋರದಂತೆ ಮಾಡಿದ್ದು

**ಅವಚ್ಛಿನ್ನೋಪಾದಿ**

೧) (ವಿ.ಸಾ.೨೮೬) ಅವಿದ್ಯೆ ಎಷ್ಟು ಪ್ರದೇಶದಲ್ಲಿರುವದೋ ಅಷ್ಟರಲ್ಲಿಯೇ ಚೈತನ್ಯವನ್ನು ಅಳತೆಗೆ ತಂದು ಪರಿಚ್ಛನ್ನತ್ವವನ್ನುಂಟು ಮಾಡಿದ್ದರಿಂದ ಅವಚ್ಛನ್ನೋಪಾದಿಯೆನಿಸುವದು ಘಟಕಾಶದಂತೆ.ಅರ್ದದಗ್ಧ ಕಾಷ್ಟಕಿ ನ್ಯಾಯಿ ಯಃ

**ಅಸಮವಾಯ**

೨) (ವೃಪ್ರ.ಪೇಜ ೧೯೭) ಕಾರ್ಯದ ಸಮವಾಯಿ ಕಾರಣದಿಂದ ಸಂಬಂಧಿಯಾಗಿ ಯಾವ ಕಾರ್ಯವನ್ನು ಹುಟ್ಟಿಸುವದು ಅದಕ್ಕೆ ಅಸಮವಾಯ ಕಾರಣವೆಂದು ಹೇಳುವರು (ಇದು ನ್ಯಾಯ ವೈಶೇಷಿಕ ಮತದ ಪ್ರಕಾರ)

**ಅಸಮವಾಯ**

೧) (ವೃಪ್ರ.೧೯೭ ಪೇಜ) ಸಮವಾಯಿ ಕಾರಣ ಮತ್ತು ನಿಮಿತ್ಯ ಕಾರಣದಿಂದ ವಿಲಕ್ಷಣ ಅಸಮವಾಯಿ ಕಾರಣವಿರುವದರಿಂದ ಅಸಮವಾಯಿ ಕಾರಣ ಮೂರು ಪ್ರಕಾರ ವಿರುವದು.

೨) ಹೇಗೆಂದರೆ ದ್ರವ್ಯ ಉತ್ಪತ್ತಿಯಲ್ಲಿ (ಘಟದ ಉತ್ಪತ್ತಿಯಲ್ಲಿ) ಅವಯವ ಸಂಯೋಗ ಅಸಮವಾಯಿ ಕಾರಣವಿರುವದು. ಅದರಂತೆ (೨) ಗುಣದ ಉತ್ಪತ್ತಿಯಲ್ಲಿ ಕೆಲವು ಕಡೆಯಲ್ಲಿ ಗುಣ ಅಸಮವಾಯಿ ಕಾರಣ ಇರುವದು. ಕೆಲವು ಕಡೆಯಲ್ಲಿ ಕ್ರಿಯಾ ಅಸಮವಾಯಿ ಕಾರಣವಿರುವದು.

**ಸಮವಾಯಿ ಕಾರಣ**

ಉಪದಾನ ಕಾರಣಕ್ಕೇನೆ ಸಮವಾಯಿ ಕಾರಣವೆನ್ನುವರು

**ಅರ್ಪಣ**

(ವಿ.ಸಾ.ಅಂಕ ೧೦೨) ತನುವಿನಿಂದ ಗುರುಸೇವಾ ಬಹಳ ವಿಸ್ತಾರವಾಗಿ ಮಾಡಬೇಕು. ಗುರುವಿನ ಆಜ್ಞೆಯನ್ನು ಸ್ವಲ್ಪವೂ ಮೀರಬಾರದು ಇದು ತನು ಅರ್ಪಣ.

**ಮನ ಅರ್ಪಣ**

(ವಿ.ಸಾ.ಅಂಕ ೧೩೦) ಮನದಲ್ಲಿ ಯಾವ ಪ್ರೇಮ ಲಕ್ಷಣಾತ್ಮಕವಾದ ಬಕ್ತಿಯನ್ನು ಗುರುವು ಪರಮಾತ್ಮ ಸ್ವರೂಪನೆಂದು ತಿಳಿದು ಭಕ್ತಿಯನ್ನು ಇಡಬೇಕು. ಹೀಗೆ ಶ್ರುತಿ

ಪ್ರಮಾಣವಿರುವದು. ಹೇಗೆ ದೇವರಲ್ಲಿ ಭಕ್ತಿಯಿರುವದೋ ಅದರಂತೆ ಗುರುವಿನಲ್ಲಿ ಪರಮ ಭಕ್ತಿ ಇರಬೇಕು ಆಗ ಪರಮಾತ್ಮನು ಹೇಳಿದ ಬ್ರಹ್ಮ ಆತ್ಮರ ಏಕತಾರೂಪ ವೇದದ ಅರ್ಥ ತಾನೆ ಪ್ರಕಾಶವಾಗುವುದು.

ಧನ ಅರ್ಪಣ

ಪತ್ನಿಪುತ್ರ, ಭೂಮಿ ಧನ, ಮೊದಲು ಮಾಡಿಕೊಂಡು ಸರ್ವವನ್ನು ತ್ಯಾಗಮಾಡಿ ಯಾವ ತ್ಯಾಗಿ ಗುರು ಇರುವನೋ ಅವನನ್ನು ಶರಣು ಹೋಗಬೇಕು ಇದಕ್ಕೆ ದನ ಅರ್ಪಣವೆಂದು ಹೇಳುವರು ಏಕೆಂದರೆ ಗುರುಗಳು ತ್ಯಾಗಿ ಇರುವರು. ಅವರು ಸ್ವೀಕರಿಸುವದಿಲ್ಲ ಪರಂತು ಗುರು ಪ್ರಾಪ್ತಿಗಾಗಿ ಧನಾದಿಗಳನ್ನು ತ್ಯಾಗ ಮಾಡಬೇಕು ಎಂದು ಹೇಳಿರುವದು. ಆದ್ದರಿಂದ ಹೀಗೆ ಯಾವ ತ್ಯಾಗವಿರುವದು ಆದಾದರೂ ಗುರುವಿಗೆ ಅರ್ಪಣವಾಯಿತೆಂದು ತಿಳಿಯಬೇಕು.

ಅಗ್ನಿ (ಪ.ಭೋ.೧-೯-೫)

೧) ಬೆಳಗುವ ಸಂತಾಪಿಸುವ ಸಲೆ ಮೆಲಕ್ಕುಚ್ಚಳಿಸುವ ಪಚಿಸುವ ನಿಜದಿಂದೆ ತಿಳಿ ಶಬ್ದಸ್ಪರ್ಶನ ರೂಪೆಂಬ ಗುಣದಿಂದೆ ನಿಲೆವಹ್ನಿಯದು ತಾನೆ.

ಅಗ್ನಿಯ ಉತ್ಪತ್ತಿ : (ಪ.ಗೀ.೨-೧) ವಾಯುವಿನನೊಳಗಾ ಪಾವಕವಾಯ್ತು.

ಅಗ್ನಿಯ ತತ್ವಗಳು

೧) (ವಿ.ಚಂ.ಪೇಜ ೪೧) ನಿದ್ರಾ, ತೃಷಾ ಕಾಂತಿ ಕ್ಷುಧಾ ಆಸಲ್ಯ.

೨) (ಪಾ.ಗೀ.೨-೮) ಖುದ್ದಿಯುದಾ ನಂ ರೂಪಂಪಾದ ಬದ್ಧವೆನಿಪ ಶಿಖಿಕಳಿಗಳ ಬೇಧ.

ಅಪವಾದ

೧) (ವಿ.ಚಿಂ.೬೮) ಅಹಿಯಲ್ಲ ರಜ್ಜುವೇ ಇದು ರಜತವಲ್ಲ ಶುಕ್ತಿಯೇ ಇದು ಚೋರನಲ್ಲ ಸ್ಥಾಣುವೆ ಎಂಬಂತೆ ವಿಚಾರ ಮುಖದಿಂದ ಪ್ರಪಂಚವೆಲ್ಲಂ ಮಿತ್ಯ ಬ್ರಹ್ಮವೇ ಸತ್ಯವೆಂಬುದೇ ಅಪವಾದ ಮುಕ್ಕುಂ.

೨) ಅವಸ್ತು ವಸ್ತು ಕಥನಂ ಅಪವಾದಃ

೩) ಬ್ರಹ್ಮಜ್ಞಾನದಿಂದ ಮಾಯಾ ಮತ್ತು ಅವಿದ್ಯಾ ನಿವೃತ್ತಿವುಂಟಾಗುವುದು ಅದರಿಂದ ಪ್ರಕೃತಿ ಬ್ರಹ್ಮದ ಸಂಬಂಧದ ನಿವೃತ್ತಿಯಾಗುವುದು, ಅದರಿಂದ ಜೀವಭಾವ ಈಶ್ವರ ಭಾವದ ನಿವೃತ್ತಿಯಾಗುವುದು, ಅದರಿಂದ ಜೀವ ಈಶ್ವರರ ಬೇಧದ ನಿವೃತ್ತಿಯಾಗುವುದು, ಅದರಿಂದ ಬಂಧದ ನಿವೃತ್ತುಂಟಾಗಿ ಮೋಕ್ಷಸಿದ್ಧವಾಗುವುದು. ಈ ರೀತಿಯಿಂದ ಏಕ ಕಾಲದಲ್ಲಿ ಸರ್ವ ಆರೋಪದ ನಿವೃತ್ತಿ ರೂಪ ಅಪವಾದವಿರುವುದು.

೪) (ಕೈವಲ್ಯ ೫-೫-೧-೨-೩) ಜ್ಞಾನದಿಂದ ಮರವೆಯಳಿವುದು ಮರವೆಯ ಹಾನಿಯಿಂದ ಬೇಧ ಬುದ್ಧಿ ಕೆಡುವುದು ಕೆಡಲು ಹಾನೋಪಾದನೆವನುಳ್ಳ ವಿಷಯವದಿದೆಂಬ ಮಾನ ವಿಕೃತಿ ಪೋಪುದು ಇತ್ಯಾದಿ.

೫) (ವಿ.ಚಿಂ.೬೮) ಸರ್ಪದ ಮತ್ತು ಅದರ ಜ್ಞಾನದ ಬಾದವಾಗಿ ರಜ್ಜುರೂಪ ಅದಿಷ್ಠಾನದ ಅವಶೇಷದಂತೆ ಪ್ರಪಂಚ ಮತ್ತು ಅದರ ಜ್ಞಾನವನ್ನು ಬಾಧಾಮಾಡಿ ಅಧಿಷ್ಠಾನರೂಪ ಶುದ್ಧಬ್ರಹ್ಮದ ಯಾವ ಅವಶೇಷ ವಿರುವವೋ ಅದಕ್ಕೆ ಅಪವಾದವೆನ್ನುವರು.

ಅಭಾಸ

೧) (ವಿ.ಚಂ.ಪೇಜ ೨೨೫) ಚೈತನ್ಯ (ಬ್ರಹ್ಮ)ದ ಲಕ್ಷಣದಿಂದ ರಹಿತ ಇರುವದು ಮತ್ತು ಚೈತನ್ಯದಂತೆ ಪ್ರತೀತಿಯಾಗುವದು ಅದು ಚಿದಾಭಾಸವೆಂದು ಹೇಳಿರುವರು.

ಅವಿರಳನು:

೧) (ಕೈವಲ್ಯ ೫-೩೨) ತನು ಬಾಹ್ಯವೆಲ್ಲವನರಿವುದರಿಂದೆ ಮನವಾತುಗಳನ್ನು ಮೀರಿಹುದರಿಂದ ಇನಿತನಿತೆಂದು ಊಹಿಸಲು ಬಾರದಿಹುದರಿಂದ ಲನುಪಮನಹುದರಿಂದ ವಿರಳನು.

ಅಭೇಧ ನಿಶ್ಚಯ

೧) (ವಿ.ಚಂ.೧೪೯-೧೫೦) ಶುದ್ಧ ಬ್ರಹ್ಮ ಬಿಂಬವಿರುವದು. ಅದು ಅಜ್ಞಾನರೂಪ ದರ್ಪಣದಲ್ಲಿ ಜೀವ ರೂಪ ಪ್ರತಿಬಿಂಬ ಬಾಸಿಸುವುದು. ಅದರಲ್ಲಿ ಆ ಜೀವ ರೂಪ ಪ್ರತಿಬಿಂಬವು ಈಶ್ವರರೂಪ ಬಿಂಬದೊಡನೆ ಸದಾ ಅಬೇಧವೆ ಇರುವದು ಪರಂತು ಮಾಯಾ ಬಲದಿಂದ ಜೀವನಧರ್ಮ ಬಿಂಬ ರೂಪ ಈಶ್ವರನಿಂದ ಭೇದ, ಜೀವತ್ವ, ಅಲ್ಪಜ್ಞತ್ವ, ಅಲ್ಪಶಕ್ತಿತ್ವ, ಪರಿಚ್ಛಿನ್ನತ್ವ, ಅನೇಕತ್ವ, ಇತ್ಯಾದಿ ಮತ್ತು ಅದರ ಪ್ರತೀತಿರೂಪ ಜ್ಞಾನ ಆದು ಬ್ರಾಂತಿಯಿಂದ ಆದ್ದರಿಂದ ಅದರ ಮಿತ್ಯತ್ವ ನಿಶ್ಚಯರೂಪ ಬಾದಮಾಡಿದರೆ ಜೀವರೂಪ ಪ್ರತಿಬಿಂಬವು ಮತ್ತು ಈಶ್ವರಬಿಂಬವು ಸದಾ ಅಭೇಧ ನಿಶ್ಚಯ ಉಂಟಾಗುವುದು.

ಅಂಶಮೂರು (ವಿ.ಚಂ.೯೧)

೧) ಸಾಮಾನ್ಯ ಅಂಶ , ವಿಶೇಷಾಂಶ , ಕಲ್ಪಿತ ವಿಶೇಷಾಂಶ.

ಅಂತರ್ಯಾಮಿ (ವಿ.ಸಾ.೧೭೧)

೧) ಸರ್ವಕೆ ಅಂತರ ಪ್ರೇರಣಾಕರೆ ಹೈಯಾತೆ ಅಂತರ್ಯಾಮಿ ಹೈ.

೨) ಅಂತಕರಣ ನೇಮಕಾಃ ಅಂತರ್ಯಾಮಿ.

೩) ಸಕಲಜೀವ ನೇಮಕಾ ಅಂತರ್ಯಾಮಿ.

ಅರ್ಜವ (ಪ.ಬೋ.೫-೨-೯)

೧) ಸಕಲ ನಿವೃತ್ತಿಗಳೊಳು ಪ್ರವೃತ್ತಿಗಳೊಳು ಸಕಲ ಧರ್ಮಾ ಧರ್ಮ ದೆಡೆಯೊಳು ಸಕಲ ವಿಷೆಯಗಳೊಳು ಸಮಬುದ್ಧಿಯದು ತನ. ಗಕಲಂಕವೆನಿಸು ವರ್ಜವವಕ್ಕು.

ಅಗಣಿತನು (ಕೈವಲ್ಯ ೫-೨೩-೪)

೧) ಗಗನದಂದದಿ ನಿರವಯವ ನಹುದರಿಂದೆ. ಸ್ವರ್ಗತಾದಿ ಬೇಧವಿಲ್ಲದ ಕತದಿಂದೆ. ನಿಗಮವನಂತ ಮೆಂದೊರೆವುದರಿಂದಾವ ಬಗೆ ದೋರದಿಹುದರಿಂದ ಅಗಣಿತನು।

ಅತಿಮಾತ್ರನು

೧) (ಕೈವಲ್ಯ ೪-೩-೩) (ಉತ್ತಮ ಯೋಗ ಸಾಧಕ) ವರನೀತಿ ಕ್ಷಮೆ ಧೈರ್ಯ ಸತ್ಯವಚನ ನಿರ್ಧರಣ ನಿರ್ಮಲ ಚಿತ್ತ, ಸಾರಶೌರ್ಯ. ಪರಿತೋಷವಿನಯಾದಿ ಸರ್ವಸುಗುಣವಾವರಿಸಿ ತೋರ್ಪವನತಿಮಾತ್ರನಹನು.

ಅತಿಮಾತ್ರತರನು

(ಕೈವಲ್ಯ ೪-೩-೪) (ಉತ್ತಮೋತ್ತಮ ಸಾಧಕ) ಬಹುಶಾಸ್ತ್ರಪರಿಣಿತ ನಿಹಪರವಿ; ರಹಿತ ನಖಿಳ ಕರ್ಮದೂರ ನಧಿಕ ವಹಶೂರ ನವಿಕಾರಿ ತತ್ವಭಾವ ಸಂನಿಹಿತ ನೆನಿಪನತಿಮಾತ್ರತರ ನಹನು.

ಅಸಂಗ

೧) (ವಿ.ಚಂ.ಪೇಜ ೧೭೮ ರಿಂದ ೧೮೦) ಆತ್ಮನು ಸ್ವಗತ ಸಜಾತಿಯ ವಿಜಾತೀಯ ಸಂಬಂಧ ರಹಿತನಿರುವುದರಿಂದ ಆತ್ಮನು ಅಸಂಗ.

೨) (ವಿ.ಸಾ.ಅಂಕ ೩೬೬) ಆತ್ಮನು ಸಂಗರಹಿತನಿರುವುದರಿಂದ ಅಸಂಗನು

೩) (ವಿ.ಚಿಂ.೧೮೩) ಆತ್ಮ ಸರ್ವ ಸಂಬಂಧದಿಂದ ರಹಿತ ಇರುವದರಿಂದ ಅಸಂಗ.

ಅದ್ವಯ (ಕೈವಲ್ಯ ೫-೩೨-೨)

೧) ಅಣು ಪರಿಮಾಣ ಮಧ್ಯಮ ಪರಿಮಾಣಗಳೆಣಿಕೆ ತನ್ನೊಡಗೂಡಗೂಡದಿಹುದರಿಂದ ಗುಣ ಜಾತಿ ಕರ್ಮಾದಿ ರಹಿತತ್ವದಿಂದೇಕರಣವಿಡಿಯದುದುದರಿಂದದ್ವಯನಹನು.

೨) (ವಿ.ಚಂ.೧೮೦) ಆತ್ಮಾದ್ವೈತ ರಹಿತ ಹೋನೇತೆ ಆತ್ಮಾ ಅ್ವೈತ ಹೈ.

ಅನುಕ್ತ

೧) ಅಧ್ಯಾತ್ಮ ಹೇಳದೆ ಇರುವ ಅನಾತ್ಮವನ್ನು ಬೇರ್ಪಡಿಸಿ ಆತ್ಮಸ್ವರೂಪವನ್ನು ತಿಳಿಯುವ ಕಲೆಯೆ ಅಧ್ಯಾತ್ಮವೆನಿಸುವದು.

ಅಧ್ಯಾತ್ಮ ಶಾಸ್ತ್ರತ್ರಯ

೧) (ವಿ.ಚಿಂ.೩೦) ಕಪಿಲ ಪತಂಜಲ ವ್ಯಾಸರೆಂಬ ಮುನಿಗಳಿಂ ಕ್ರಮದಿಂದ ನಿರೂಪಿತಗಳಾದ ಸಾಂಖ್ಯ ಪತಂಜಲ, ವೇದಾಂತಗಳೆಂಬ ಸಾಂಖ್ಯ ಸೂತ್ರ ಬ್ರಹ್ಮಸೂತ್ರತ್ರಯವೇ ಸಭಾಷ್ಯ ಪ್ರಕರಣ ಟೀಕಾ ಪರಿಷ್ಕೃತಮಾಗಿ ಸ್ವಾತ್ಮ ಜ್ಞಾನ ಫಲಿಭೂತ ಮೋಕ್ಷ ಪ್ರತಿಪಾದಕವಾಗಿರುವದರಿಂದ ಅಧಾತ್ಮ ಶಾಸ್ತ್ರತ್ರಯವೆನಿಸುವದು.

ಅಧ್ಯಾತ್ಮ ಮತಬೇಧ

೧) (ವಿ.ಚಿಂ.೩೪) ಬಾಸ್ಕರೀವಾದ ಮಾಯಾವಾದ, ಶುದ್ಧ ಬ್ರಹ್ಮವಾದ, ಕ್ರೀಡಾ ಬ್ರಹ್ಮವಾದವೆಂದು ಸಾಮಾನ್ಯತಃ ನಾಲ್ಕು ತೆರನಾಗಿಯುಂ ಅನಿರ್ವಚನೀಯ ಖ್ಯಾತಿ ಮುಂತಾದ ತತ್ತದನುಭವಗಳಿಂ ಸಂವಳಿತ್ತಮಾಗಿಯುಂ ಪ್ರಚುರಗೊಂಡಿರ್ಪುದು.

**ಅಧ್ಯಾತ್ಮ ವಿಚಾರ**

೧) (ಪಾ.ಗಿ.೮-೫)ಸಕಲ ಪದಾರ್ಥಂಗಳ ಬಿಡುವಂತೊರೆವಾ । ಸಕಲ ಸುಖಂದೊರೆವಂತಿರಲೊರೆವ । ಸಾದರದಿಂಮಿಗೆ ಸದ್ಗುರು ವಿಂದೆ ವೇದರಹಸ್ಯಾರ್ಥವನೊಲವಿಂದೆ ಕೇಳುವ ಹೊತ್ತೀಶ್ವರ ಲಕ್ಷಣೆಯ । ಮೇಲಾಜೀವನ ನಿಜ ಲಕ್ಷಣೆಯ। ಒಂದರೊಳಾದು ಭಯಾಧ್ಯಾಸವನು। ಮುಂದಾ ಬಹುವಿಧದ ಧ್ಯಾಸವನು । ಜೀವೇಶ್ವರರೇಕತ್ವದ ನಿಲವ । ಭಾವಿಸುತಾ ಸಹಜಾತ್ಮನ ನಿಜವ । ತಿಳಿವನ್ನೆಗಮಾರ್ಯೈವುತ್ತಿಹು । ತಿಳಿಯಧ್ಯಾತ್ಮ ವಿಚಾರವೆನಿಪುದು. । ೫ ।

**ಅನ್ಯಥಾ ಸಿದ್ಧಿ**

೧) (ವೃ.ಪ್ರ.ಪ್ರ.೨ ಪೇಜ ೩೯) ಕಾರಣ ಸಾಮಗ್ರಿತೆ ಬಾಹ್ಯ ಹೋವೆ ಸೋ ಅನ್ಯಥಾ ಸಿದ್ಧಿ ಕಹೆ ಹೈ.

**ಅತೀತ : ಕಳೆದು ಹೋದ**

**ಅನಾಗತ ಮುಂದೆ ಬರುವ**

**ಅನುಪಲಂಬ** (ವೃ.ರ.ಅಂಕ ೧೭೬) ಜ್ಞಾನದ ಅಭಾವಕ್ಕೆ ಅನುಪಲಂಬ ವೆನ್ನುವರು.

**ಅಸೂಯೆ**

(ಇ.ವಿ.ಪೇಜ ೩೬೮) ಪರಕೀಯ ಗುಣೇಷು ದೋಷತ್ವಾರೋಪಣ ಅಸೂಯಾಃ ಇತರರ ಗುಣಗಳಲ್ಲಿ ದೋಷಾರೋಪಣವು ಅಸೂಯೆಯೆನಿಸುವದು.

## ಆ

**ಆತ್ಮಾ**

೧) ಮುಖ್ಯ ಪ್ರತೀತಿಗೆ ಆಶ್ರಯವಾದದ್ದು ಆತ್ಮಾ.

೨) ಸ್ವಯಂ ಪ್ರತೀತಿಗೆ ವಿಷಯವಾದದ್ದು ಆತ್ಮಾ

೩. ಅಣೋರಣಿಯಾನ್ ಜ್ಞಾನಕ್ಕೆ ವಿಷಯನಲ್ಲ

ಮಹತೋ ಮಹಿಯಾನ್ (ವ್ಯಾಪಕವಿರುವುದರಿಂದ)

೪) ದೇಹ ವೈಧರ್ಮ್ಯವಾನ್ ಆತ್ಮಾ

**ಆತ್ಮಾಸ್ವರೂಪ**

(ವಿ.ಚಂ.ಪೇಜ ೨೬೫) ದೇಹ, ಇಂದ್ರಿಯ, ಪ್ರಾಣ, ಮನ, ಬುದ್ಧಿ, ಅಜ್ಞಾನ, ಔರ, ಶೂನ್ಯಸೇ ಬಿನ್ನ ಅಕರ್ತಾ, ಅಭೋಕ್ತಾ, ಅಸಂಗ, ವ್ಯಾಪಕ, ಚೇತನ ಆತ್ಮಾಕಾ ಸ್ವರೂಪ ಹೈ.

**ಆತ್ಮಾಕಾ ಸದ್ರೂಪ**

೬) (ವಿ.ಸಾ.ಅಂಕ ೩೫೫) ಜಾಕಿ, ಕಿಸಿಕಾಲಮೆ ನಿವೃತ್ತಿ ಹೋವೆ ನಹಿ ತಾಕುಸತ್ ಕಹಿಯೆ ಹೈ ಆತ್ಮಾಕಿ ನಿವೃತ್ತಿ ಹೊವೆ ನಹಿಯಾ ಹೀತೆ ಆತ್ಮಾಸತ್ ಹೈ.

೭) ಆತ್ಮಾ ಚಿದ್ರೂಪ ಹೈ (ವಿ.ಸಾ.೩೫೬) ಪ್ರಕಾಶರೂಪ ಜೋ ಜ್ಞಾನ ಸೋ ಚಿತ್ ಕಹಿಯೆ ಹೈ ಆತ್ಮಾ ಸರ್ವತಾ ಪ್ರಕಾಶ ಕರೆ ಹೈ ಸೋಪ್ರಕಾಶ ರೂಪ ಹೈ ಸರ್ವಕಾ ಪ್ರಕಾಶಕ ಜ್ಞಾನರೂಪ ಆತ್ಮಾ ಹೈ ಯಾತೆ ಚಿತ್ ಹೈ.

೮) ಆತ್ಮಾ ಆನಂದ ರೂಪ ಹೈ (ವಿ.ಸಾ.ಅಂಕ ೩೬೯) ಸರ್ವಕಿ ಪ್ರೀತಿಕಾ ವಿಷಯ ಜೋ ಆತ್ಮಾ ಸೋ ಆನಂದರೂಪ ಹೈ. ಆತ್ಮಾ ಸತ್‌ರೂಪ ಹೈ.

೯) (ವಿ.ಸಾ.ಅಂಕ ೩೬೪) ಏ ಕಹೀ ಆತ್ಮ ನಿವೃತ್ತಿ ರಹಿತ ಹೈ ಯಾತೆ ಸತ್ ರೂಪಕಹಿಯೆ ಹೈ.

ಆತ್ಮಾಚಿತ್ತರೂಪ ಹೈ

೧೦) ಜಡಸೆ ವಿಲಕ್ಷಣ ಪ್ರಕಾಶ ರೂಪ ಹೈ ಯಾತೆ ಚಿತ್ತರೂಪ ಕಹಿಯೆ ಹೈ.

೧೧) ಆತ್ಮಾ ಆನಂದ ರೂಪ:- ದುಃಖಸೆ ವಿಲಕ್ಷಣ ಮುಖ್ಯ ಪ್ರತೀತೀಕಾ ವಿಷಯ ಹೈ ಯಾತೆ ಆನಂದ ರೂಪ ಕಹಿಯೆ ಹೈ.

೧೨) ಆತ್ಮಾ ಸಚ್ಚಿದಾನಂದ ರೂಪ ಹೀ ಶಾಸ್ತ್ರಮೆ ಬ್ರಹ್ಮಕ ಹ್ಯಾ, ಯಾತೆ ಬ್ರಹ್ಮಸ್ವರೂಪ ಆತ್ಮಾ ಹೈ.

೧೩) ಆತ್ಮಾ ನೈಯಾಯಿಕರು ಜಡವೆನ್ನುತ್ತಾರೆ.

೨. ಸಾಂಖ್ಯರುಚಿಜ್ಜಡವೆನ್ನುತ್ತಾರೆ.

೩. ವೇದಾಂತಿಗಳು ಚೇತನವೆನ್ನುತ್ತಾರೆ.

ಆತಮ್ನಿಗೆ ವಿಶೇಷಣ ಕೃತ ನಾಮಗಳು.

ಪಾಪಾತ್ಮ

೧) ಮಲಿನ ಅಂತಃಕರಣ ಮಿಲಿತ ಪಾಪ ದೋಷಗಳಿಂದ ಪಾಪಾತ್ಮಾ ಎಂದು ಕರೆಸಿಕೊಳ್ಳುವನು.

ಪುಣ್ಯಾತ್ಮಾ:-ಶುದ್ಧ ಅಂತಕರಣ ಮಿಲಿತ ಪುಣ್ಯ ವಿಶೇಷದಿಂದ ಪುಣ್ಯಾತ್ಮಾ ಎಂದು ಕರೆಸಿಕೊಳ್ಳುವನು.

ಬೂತಾತ್ಮಾ (ಪ.ಭೋ.೧-೧೪-೨) ಭೂತವಿಕೃತತಯಿಂದೆ ಮಾತಾಪಿತರ ರಕ್ತರೇತೋಯೋಗದ ಪರಿಣತೆಯಿಂದ ಜಾತ ಮಾದೀತನು ತಾನೆನೆ ಜೇವಂಗೆ ಭೂತಾತ್ಮನೆಂದೆಂಬ ಪಸರಕ್ಕು ॥ ೨ ॥

ಇಂದ್ರಿಯಾತ್ಮ (ಪ.ಭೋ.೧-೧೪-೩) ನೆರೆ ಬುದ್ಧಿಂದ್ರಿಯ, ಕರ್ಮೆಂದ್ರಿಯವೆಂಬೆರಡು ವರ್ಗವರಿವ ಮಾಡುವ ಎಲ್ಲವನು ತಾನೆ ಅರಿದೆ ನೆಸಗಿದೆ ನೆಂಬುದದರಿಂದೆ ಜೇವಂಗೆ ಮೆರೆವುದು ಕೇಳಿಂದ್ರಿಯಾತ್ಮತೆ.॥೩॥

ಅಹಂಕರಣಾತ್ಮಾ (ಪ.ಭೊ.೧-೧೪- ೪) ಮಾನಸಾದಿಗಳೆಸಗಿದ ಕರ್ಮತತಿಯನು ತಾನೆ ಸಗಿದೆನೆಂಬಗೆಯಿಂದೆ ಮಾನಿನಿ ಕರಣಾತ್ಮನೆಂಬ ಭಿದಾನವಾ ಜೇವಂಗೆ ಸವನಿಸಿರ್ಕು॥ ೪ ॥

೧) ವಿ.ಜ್ಞಾನತ್ಮಾ (ಜೀವಾತ್ಮ) ಪ.ಭೋ.೧-೧೪-೫) . ಜ್ಞಾನಾತ್ಮನಾಗಿ ತಾನಿರ್ಪುದನಾಕರಣಾನೀಕದಿಂದೆಮರೆದು ತನ್ನ ತಾನಜ್ಞನೆಂಬುದರಿಂದ ಜೀವಂಗೆ ವಿಜ್ಞಾನಾತ್ಮಾನೆಂದೆಂಬ ಪೆಸರಕ್ಕು||೫||

೨) (ಪ.ಭೋ.೧-೬) ಮರೆದೊಡೆ ಜೀವಾತ್ಮ

೩) (ವಿ.ಚಿಂ.೭೮) ವೇದಾದಿಗಳೊಡನೆ ತನ್ನಸಂಬಂಧ ಸಕಲ ಸಂಸಾರ ವ್ಯವಹಾರುಳ್ಳಾತನೆ ಜೀವಾತ್ಮನು.

ಅಂತರಾತ್ಮ (ಪ.ಭೋ.೧-೧೪-೬) ವಿಜ್ಞಾನಾತ್ಮನು ಜೀವನ ಜ್ಞೊಹಮೆಂಬ ತಂನಜ್ಞ ಭಾವನೆಯನ್ನು ತಿಳಿದಂದು. ವಿಜ್ಞಾನಾತ್ಮಂ ತಾನೇ ಬಳಿಕಂತರಾತ್ಮಕ ಸಂಜ್ಞೆಯ ಪಡೆವನಂತದರಿಂದೆ || ೬ ||

೨) (ಪ.ಭೋ.೧-೬-೧೧) ಅರುವು ಮರೆವೆಗಳೆಂಬೆರೆಡನು ನೇರೆಕೂಡಲಂತರಾತ್ಮ

೩) (ವಿ.ಚಿಂ.೭೮) ಕಮಲ ಪತ್ರೋದಕದಂತೆ ಜೀವನು ಸಂಸಾರ ಮಂ ಪೊಂದಿಯ ಪೊಂದದಾತನೆ ಅಂತರಾತ್ಮನಕ್ಕುಂ.

ಪರಮಾತ್ಮ

೧) (ಪ.ಭೋ.೧-೧೪-೭) ಭಾವಿಸಲಂತಜ್ಞ ಭಾವನೆಯೊಳು ತೋರ್ಪು ಜೀವ ಪಂಚಕವಿದು ಪುಸಿಯೆಂದು ಭಾವಿಸಿ ತನ್ನ ತಾನರಿಯಲವನು ತಾನೆ ಭಾವರಹಿತನಾದ ಪರಮಾತ್ಮ || ೭ ||

೨) (ವಿ.ಚಿ.೭೮) ಲೋಕವ್ಯವಹಾರಕ್ಕೆ ಸೂರ್ಯನಂತೆ ಜೀವಾತ್ಮ ಅಂತರಾತ್ಮ ವ್ಯವಹಾರಗಳಿಗೆ ಸಾಕ್ಷಿಯೇ ಪರಮಾತ್ಮನಪ್ಪಂ

೩) (ಪ.ಭೋ.೧-೬-೧೧) ಅರಿದೊಡೆ ಪರ ಪರಮಾತ್ಮ

ಆತ್ಮಾ

(ವಿ.ಚಿಂ.೩೨) ಸಮಸ್ತಮತಾಂತರಗಳಲ್ಲಿ ಪೇಳುವಾತ್ಮ ಸ್ವರೂಪವೆಂತೆನೆ.

೧) ದೇಹವೇ ಆತ್ಮವೆಂಬರು ಚಾರ್ವಕರು

೨) ಇಂದ್ರಿಯಗಳೇ ಆತ್ಮನೆಂಬರು ಚಾರ್ವಾಕೈಕ ದೇಸಿಗಳು

೩) ಪ್ರಾಣವೇ ಆತ್ಮನೆಂಬರು ಹಿರಣ್ಯಗರ್ಭೋಪಾಸಕರು

೪) ದೇಹವಿಲಕ್ಷಣನಾದಾತ್ಮನು ದೇಹ ಪರಿಮಿತನಾಗಿ ಮಧ್ಯಮ ಪರಿಮಾಣದಿಂದ ಸಂಕೋಚ ವಿಕಾಸ ಧರ್ಮಯುಕ್ತನೆಂಬರು ಜೈನರು.

೫) ಬುದ್ಧಿಯೇ ಆತ್ಮನೆಂಬದು ಬೌದ್ಧರು

೬) ಆನಂದ ಮಾತ್ರಮಂ ಆತ್ಮನೆಂಬರು ಕೌಳಯಾಮಳ ಶಾಕ್ತೆಯರು.

೭) ಆತ್ಮನು ನಾಡಿ ಮದ್ಯಗತನಾಗಿ ಅಣುಪರಿಮಾಣನೆಂಬರು ಪಾಂಚರಾತ್ರರು.

೮) ಆತ್ಮನು ದೇಹ ಪುತ್ರಾದಿಕನೆಂಬರು ಲೌಕಿಕರು.

೯) ಆತ್ಮನು ಸ್ವತಃ ಪ್ರಮಾಣ ಜ್ಞಾನ ಸಮೇತನೆಂಬರು ಮೀಮಾಂಸಕ ಭೇಧ ಮಾದ ಭಟ್ಟ ಪ್ರಭಾಕರರು.

೧೦) ಆತ್ಮನು ಗಗನದಂತೆ ಮಹತ್ ಪರಿಮಾಣನಾಗಿ ಪಾಷಾಣದಂತೆ ಜಡರೂಪನಾದೊಡಂ ಮನಃ ಸಂಯೋಗದಿ ಚಿದ್ಧರ್ಮ ಯುಕ್ತನೆಂಬರು ನೈಯಾಯಿಕರುಗಳು.

೧೧) ಆತ್ಮನು ಅಸಂಗ ಚಿನ್ಮಾತ್ರನೆಂಬರು ಸಾಂಖ್ಯಪಾತಂಜಲರುಗಳು.

೧೨) ಆತ್ಮನು ಜ್ಞಪ್ತಿಸತ್ತಾಮಾತ್ರ ಶುದ್ಧಾದ್ವಿತೀಯನೆಂಬರು ವೇದಾಂತಿಗಳು.

೧೩) ಆತ್ಮನು ನಿತ್ಯ ವ್ಯಾಪಕ ಚೈತನ್ಯ ರೂಪನೆಂಬರು ಪಾಶು ಪತಕಾ ಪಾಲಿಕ ಮಹಾವ್ರತರುಗಳು.

೧೪) ಆತ್ಮನು ನಿತ್ಯವ್ಯಾಪಕ ಜ್ಞಾನಕ್ರಿಯಾ ರೂಪನೆಂಬರು ಮಾತ್ರ ಸಂಜ್ಞಕ ಸಿದ್ಧಾಂತಿಗಳೆಂದು ಪ್ರಥಕರಿಸಲ್ವೇಳ್ಕುಂ.

ಏಕಾತ್ಮ

೧) (ಅ.ಸಾ.ರ.೩-೩) ಏಕಾತ್ಮನೆಂಬುದೇ ಸಹಜ ವೀಕಾಣಿಸುವಾನೇಕಾತ್ಮರೆಂಬುದೆಲ್ಲಾ ಕಲ್ಪನೆ.

ಆತ್ಮಾವಿರೋಚನ ಸಿದ್ಧಾಂತ

೧) (ವಿ.ಸಾ.ಅಂಕ ೨೬೧) (ಚಾರ್ವಾಕ) ಅನ್ನಮಯ ಕೋಶವೇ ಆತ್ಮಾ ಕೆಲವು ಪಾಮರ ವಿರೋಜನ ಮತದ ಪ್ರಕಾರ ಸ್ಥೂಲ ಶರೀರರೂಪ ಅನ್ನಮಯ ಕೋಶವೇ ಆತ್ಮವೆಂದು ಹೇಳಿರುವರು. ಅವರ ಯುಕ್ತಿ ಹೀಗಿದೆ. ಯಾವದರಲ್ಲಿ ಅಹಂ (ನಾನು) ಬುದ್ಧಿ ಸ್ಥೂಲ ಶರೀರದಲ್ಲಿ ಇರುವದು ಅದುವೇ ಆತ್ಮ. ನಾನು ಮನುಷ್ಯನಿದ್ದೆನೆ ನಾನು ಬ್ರಾಹ್ಮಣನಿದ್ದೆನೆ ಹೀಗೆ ಪ್ರತೀತಿ ಎಲ್ಲರಿಗೂ ಆಗುವದು. ಮತ್ತು

೨) ಮನುಷ್ಯತ್ವ ಬ್ರಾಹ್ಮಣತ್ವ ಸ್ಥೂಲ ಶರೀರದಲ್ಲಿಯೇ ಇರುವದು ಆದ್ದರಿಂದ ಸ್ಥೂಲ ಶರೀರವೇ ಅಹಂ (ನಾನು) ಬುದ್ಧಿಗೆ ವಿಷಯವಾಗಿರುವದರಿಂದ ಸ್ಥೂಲ ಶರೀರವೇ ಆತ್ಮ ಇರುವದು. ಅಥವಾ ಯಾವುದರಲ್ಲಿ ಮುಖ್ಯ ಪ್ರೀತಿ ಇರುವದೋ ಅದುವೇ ಆತ್ಮಾ ಇರುವದು.

೩) ಸ್ತ್ರಿಪುತ್ರ, ಧನ ಪಶು ಆದಿಕ ಸ್ಥೂಲ ಶರೀರಕ್ಕೆ ಉಪಕಾರಕ ವಿರುವವು ಆದ್ದರಿಂದಲೆ ಅವುಗಳಲ್ಲಿ ಪ್ರೀತಿಯುಂಟಾಗುವದು. .

೪) ಸ್ಥೂಲ ಶರೀರಕ್ಕೆ ಉಪಕಾರ ಮಾಡದಿದ್ದರೆ ಪ್ರೀತಿ ಉಂಟಾಗುತ್ತಿದ್ದಿಲ್ಲ.

೫) ಯಾವುದರ ನಿಮಿತ್ಯ ಅನ್ನ ಪದಾರ್ಥದಲ್ಲಿ ಪ್ರೀತಿ ಉಂಟಾಗುವದೋ ಆ ಸ್ಥೂಲ ಶರೀರದಲ್ಲಿ ಮುಖ್ಯ ಪ್ರೀತಿ ಇರುವದು. ಆದ್ದರಿಂದ ಸ್ಥೂಲ ಶರೀರವು ಆತ್ಮಾ ಇರುವದು ಸ್ಥೂಲ ಶರೀರಕ್ಕೆ ಕ್ಷಣ ಸ್ತ್ರಭೂವ, ಅಂಜನ, ಮಂಜನ, ನಾನಾ ವಿಧ ಭೋಜನದಿಂದ ಶೃಂಗಾರ ಪೋಷಣವೇ ಪುರುಷಾರ್ಥವಿರುವದು. ಇದು ಅಸುರ ಸ್ವಾಮಿ ವಿರೋಚನಾ ಸಿದ್ಧಾಂತ (ವಿ.ಸಾ.ಅಂಕ ೨೬೧) (ವಿ.ಸಾ.ಟಿ.೩೦೩) ರಲ್ಲಿ ಖಂಡನ ಇರುವದು ಅದನ್ನು ನೋಡಬಹುದು.

ಆತ್ಮಾ:- (ಇಂದ್ರಿಯ ಆತ್ಮಾದಿಯ ಮತ) (ವಿ.ಸಾ.ಅಂಕ೨೬) ಸ್ಥೂಲಶರೀರವೇ ಆತ್ಮಾ ಅಲ್ಲ ಕಿಂತು

೧) ಸ್ಥೂಲ ಶರೀರದಲ್ಲಿ ಯಾವದು ಇರುವದರಿಂದ ಜೀವನ ವ್ಯವಹಾರವುಂಟಾಗುವದು ಮತ್ತು ಯಾವದು ಇರದೇ ಇದ್ದರೆ ಮರಣ ವ್ಯವಹಾರವುಂಟಾಗುವದು. ಅದು ಆತ್ಮಾ ಸ್ಥೂಲ ಶರೀರದಿಂದ ಭಿನ್ನವಿರುವದು. ಜೀವನ ಮರಣ ಇಂದ್ರಿಯದ ಅಧೀನವಿರುವದು.

೨) ಎಷ್ಟು ಕಾಲ ಶರೀರದಲ್ಲಿ ಇಂದ್ರಿಯಗಳು ಇರುವವೋ ಅಷ್ಟು ಕಾಲ ಜೀವನವಿರುವದು, ಯಾವಾಗ ಇಂದ್ರಿಯಗಳು ಇಲ್ಲವಾಗುವವೋ ಆಗ ಮರಣವಾಗುವದು. ಮತ್ತು ನೋಡುತ್ತೇನೆ, ನಾನು ಕೇಳುತ್ತೇನೆ ನಾನೂ ಹೇಳುತ್ತೆನೆ ಈ ರೀತಿಯಿಂದ ನಾನು (ಅಹಂ) ಅನ್ನುವ ಬುದ್ಧಿಯಾದರು ಇಂದ್ರಿಯಗಳಲ್ಲೇ ಇರುವದು ಅದ್ದರಿಂದ ಇಂದ್ರಿಯವೇ ಆತ್ಮಾ ಇರುವದು.

೩) ಆತ್ಮಾ (ಪ್ರಾಣ ಆತ್ಮವಾದಿಯ ಮತ) (ವಿ.ಸಾ.ಟಿ.೩೦೪) ಇಂದ್ರಿಯದ ಅಭಾವದಿಂದ ಕಿವುಡ, ಕುರುಡ, ಮೂಕ, ಕುಂಟ, ಈ ರೀತಿ ಆದರೂ ಶರೀರ ಇರುವದು. ಆದ್ದರಿಂದ ಜೀವನ ಮರಣ ಇಂದ್ರಿಯ ಆಧೀನವಲ್ಲ ಮತ್ತು ನಾನೂ ಕ್ಷುದೆಯುಳ್ಳವನು ನಾನು ತೃಷೆವುಳ್ಳವನು, ಹೀಗೆ ಕ್ಷುದಾ ತೃಷಾ ರೂಪ ಧರ್ಮವುಳ್ಳ ಪ್ರಾಣದಲ್ಲಿ ಯಾದರು ಅಹಂ ಬುದ್ಧಿ ಇರುವದರಿಂದ ಮತ್ತು ನನ್ನ ಕಣ್ಣು ನನ್ನ ವಾಣಿ ಹೀಗೆ ಇಂದ್ರಿಯಗಳಲ್ಲಿ ನನ್ನವು ಅ ಅನ್ನುವ ಬುದ್ಧಿಗೆ ವಿಷಯವಾಗುವದರಿಂದ ಇಂದ್ರಿಯಗಳಲ್ಲಿಯ ಅಹಂ ಬುದ್ಧಿಯು ವ್ಯಬಿಚಾರಿ ಇರುವದು. ಆದ್ದರಿಂದ ಇಂದ್ರಿಯ ಆತ್ಮಾ ಅಲ್ಲ.

ಪ್ರಾಣವೇ ಆತ್ಮಾ

(ವಿ.ಸಾ.ಅಂಕ.೨೬೩)(ಇದು ಹಿರಣ್ಯ ಗರ್ಭ ಉಪಾಸಕರ ಮತ) ಹೀರಣ್ಯ ಗರ್ಭ ಉಪಾಸಿಯು ಪ್ರಾಣವೇ ಆತ್ಮ ಎಂದು ಹೇಳಿರುವನು. ಅದು ಹೇಗೆಂದರೆ

೧) ಯಾವಾಗ ಮರಣ ಸಮಯದಲ್ಲಿ ಮೂರ್ಛೆವುಂಟಾಗುವದು ಆಗ ಸಂಬಂಧಿಗಳಾದ ಪುತ್ರಾದಿಗಳು ಪ್ರಾಣಶೇಷ ಇದ್ದದ್ದಾದರೆ ಇನ್ನು ಬದುಕಿದ್ದಾನೆ ಎಂದು ತಿಳಿಯುವರು ಪ್ರಾಣ ಶೇಷ ಇಲ್ಲದಿದ್ದರೆ ಮರಣವಾಗಿದೆ ಎಂದು ತಿಳಿಯುತ್ತಾರೆ.

೨) ಅಥವಾ ಶರೀರದಲ್ಲಿ ನೇತ್ರಾಧಿ ಇಂದ್ರಿಯ ಇರದೆ ಇದ್ದರು ಕುರುಡನಾದರು ಶರೀರ ಇರುವದು ಕಿವಿ ಇಲ್ಲದೆ ಕಿವುಡನಾದರು ಶರೀರ ಇರುವದು. ವಾಣಿ ಇಲ್ಲದಿದ್ದರೂ ಮೂಕನೆನಿಸಿಕೊಂಡು ಶರೀರ ಇರುವದು. ಹೀಗೆ ಯಾವ ಇಂದ್ರಿಯ ಇಲ್ಲದಿದ್ದರೂ ಅದರ ವ್ಯವಹಾರ ಇಲ್ಲದಿದ್ದರೂ ಶರೀರ ಸ್ಥಿತವಾಗಿರುವದು. ಆದರೆ ಪ್ರಾಣ ಇರದಿದ್ದರೆ ಶವ ಸಮಾನ ಅಮಂಗಲ ಭಯಂಕರವಾಗಿ ತೋರುವದು. ಮತ್ತು

೩) ನಾನು ನೋಡುತ್ತೆನೆ ನಾನು ಕೇಳುತ್ತೆನೆ ಹೀಗೆ ಪ್ರತೀತಿಯಾಗುವದು. ಇಂದ್ರಿಯ ಹೊರತಾಗಿಯೇ ಆತ್ಮ ಸಿದ್ಧವಾಗುವದು ಕಿಂತು ನಾನು ನೇತ್ರವುಳ್ಳನು ನೋಡುತ್ತೆನೆ. ಶ್ರೋತ್ರವುಳ್ಳವನು, ನಾನು ಕೇಳುತ್ತೆನೆ ಹೀಗೆ ಪ್ರತೀತಿಯಾಗುವದು. ಆದ್ದರಿಂದ ಇಂದ್ರಿಯದಿಂದ ಬಿನ್ನ ಆತ್ಮಾ ಇರುವನು. ಮತ್ತು

೪) ಸುಷುಪ್ತಿಯಲ್ಲಿ ಸರ್ವ ಇಂದ್ರಿಯಗಳಲ್ಲಿ ಅಭಾವವಿರುವದು. ಆದರೂ ಪ್ರಾಣವು ಇರುವದರಿಂದ ಜೀವನ ವ್ಯವಹಾರವು ನಡೆಯುವದು. ಆದ್ದರಿಂದ ಜೀವನ

ಮರಣವಾದರೂ ಇಂದ್ರಿಯದ ಅಧೀನವಿಲ್ಲ ಕಿಂತು ಸ್ಥೂಲ ಶರೀರವು ಪ್ರಾಣದ ವಿಯೋಗಕ್ಕೆ ಮರಣವೆಂದು ಹೇಳಿರುವರು. ಆದ್ದರಿಂದ ಜೀವನ ಮರಣ ಪ್ರಾಣದ ಅಧೀನವೇ ಇರುವದು ಆದ್ದರಿಂದ ಪ್ರಾಣವೇ ಆತ್ಮಾ|

ಮನಸ್ಸು ಆತ್ಮಾ:- (ಮನಸ್ಸುವಾದಿಯ ಮತ ಹೀಗಿರುವದು) (ವಿ.ಸಾ.ಅಂಕ ೨೬೪)

೧) ಪ್ರಾಣ ಜಡವಿರುವದು ಆದ್ದರಿಂದ ಘಟದಂತೆ ಅನಾತ್ಮ ಇರುವದು. ಮತ್ತು

೨) ಬಂದ ಮೋಕ್ಷ ಮನದ ಆಧೀನವಿರುವದು ಹೇಗೆಂದರೆ.

೧) ವಿಷಯದಲ್ಲಿ ಆಸಕ್ತವಾದ ಮನಸ್ಸು ಬಂಧನಕ್ಕೆ ಕಾರಣವಿರುವದು.

೨) ವಿಷಯವಾಸನಾ ರಹಿತ ಮನಸ್ಸು ಮೋಕ್ಷಕ್ಕೆ ಕಾರಣವಿರುವದು.

೩) ಮನದ ಸಂಬಂಧದಿಂದಲೆ ಇಂದ್ರಿಯಗಳ ಜ್ಞಾನಕ್ಕೆ ಹೇತು ಇರುವದು ಮನದ ಸಂಬಂಧದ ಹೊರತಾಗಿ ಇಂದ್ರಿಯಗಳಿಗೆ ಜ್ಞಾನವಾಗುವದಿಲ್ಲ. ಆದ್ದರಿಂದ ಸರ್ವ ವ್ಯವಹಾರಕ್ಕೆ ಕಾರಣ ಮನಸ್ಸು ಇರುವದು ಅದೇ ಮನವೆ ಆತ್ಮಾ ಇರುವದು.

ಆತ್ಮಾ ಮನಸ್ಸು ಅಲ್ಲ (ವಿ.ಸಾ.ಟಿ.೩೦೬)

ಬುದ್ಧಿಯು ಆತ್ಮಾ

(ವಿ.ಸಾ.ಅಂಕ ೨೬೫) (ವಿಜ್ಞಾನವಾದಿಯಾದ ಬೌದ್ಧನ ಮತ ಹೀಗಿರುವದು) ಮನದ ವ್ಯವಹಾರ ಬುದ್ಧಿಯ ಅಧೀನವಿರುವದು ಏಕೆಂದರೆ ಬುದ್ಧಿಯ ಆಕಾರವೇ ಮನವಿರುವದು ಆದ್ದರಿಂದ ಕ್ಷಣಿಕ ವಿಜ್ಞಾನ ರೂಪ ಬುದ್ಧಿಯೆ ಆತ್ಮಾ ಇರುವದು. ಮನವು ಅಲ್ಲ ಇದು ಅವರ ಅಭಿಪ್ರಾಯ ಇರುವುದು.

೧) ಸರ್ವಪಾರ್ಥ ವಿಜ್ಞಾನದ ರೂಪವಿರುವದು ಮತ್ತು

೨) ವಿಜ್ಞಾನ ಪ್ರಕಾಶ ರೂಪ ವಿರುವದು. ಮತ್ತು

೩) ಕ್ಷಣ ಕ್ಷಣದಲ್ಲಿ ವಿಜ್ಞಾನದ ಉತ್ಪತ್ತಿ ನಾಶವಾಗುವದು.

ಪೂರ್ವ ವಿಜ್ಞಾನದ ಸಮಾನ ಅನ್ಯವಿಜ್ಞಾನ ಉತ್ಪತ್ತಿಯಾಗುವದು. ಆದ್ದರಿಂದ ಪೂರ್ವ ವಿಜ್ಞಾನದ ನಾಶವಾಗುವದು ಅದರಂತೆ ಮೂರನೆ ವಿಜ್ಞಾನದ ಉತ್ಪತ್ತಿ ದ್ವಿತಿಯ ವಿಜ್ಞಾನದ ನಾಶ ಚತುರ್ಥದ ಉತ್ಪತ್ತಿ ತೃತಿಯದ ನಾಶವಾಗುವದು ಈ ರೀತಿಯಿಂದ ನದಿಯ ಪ್ರವಾಹದಂತೆ ವಿಜ್ಞಾನದ ದಾರಾ ಎರಡು ಪ್ರಕಾರವಿರುವದು (೧) ಅಲಯವಿಜ್ಞಾನ ದಾರಾ ಇರುವದು (೨) ಪ್ರವೃತ್ತಿ ವಿಜ್ಞಾನ ದಾರಾ ಇರುವದು.

೨) ನಾನು ನಾನು (ಅಹಂ ಅಹಂ) ಹೀಗೆ ವಿಜ್ಞಾನ ಧಾರವು ಅಲಯ ವಿಜ್ಞಾನ ಧಾರೆ ಎಂದು ಹೇಳುವರು. ಇದಕ್ಕೆ ಬುದ್ಧಿಎಂದು ಹೇಳುವರು ಇದು ಘಟ ಇರುವದು. ಇದು ಶಾರೀ ಇರುವದು ಹೀಗೆ ವಿಜ್ಞಾನ ಧಾರವು ಪ್ರವೃತ್ತಿ ವಿಜ್ಞಾನ ಧಾರಾ ಎಂದು ಹೇಳುವರು. ಅಲಯ ವಿಜ್ಞಾನ ಧಾರದಿಂದ ಪ್ರವೃತ್ತಿ ವಿಜ್ಞಾನಧಾರಾದ ಉತ್ಪತ್ತಿಯುಂಟಾಗುವದು. ಮನದ ಸ್ವರೂಪವಾದರೂ ಪ್ರವೃತ್ತಿ ವಿಜ್ಞಾನಧಾರಾದಲ್ಲಿ ಇರುವದು. ಆದ್ದರಿಂದ ಅಲ್ಲಿಯ ವಿಜ್ಞಾನ ಧಾರಾ ರೂಪ ಬುದ್ಧಿಯ ಕಾರ್ಯವಿರುವದು

ಆ ಬುದ್ಧಿಯೆ ಆತ್ಮಾ ಇರುವದು. ಆಲಯ ವಿಜ್ಞಾನ ಧಾರಾದಲ್ಲಿ ಪ್ರವೃತ್ತಿ ವಿಜ್ಞಾನದಾರಾದ ಬಾದ ಚಿಂತನದಿಂದ ನಿರ್ವಿಶೇಷ ಕ್ಷಣಿಕ ವಿಜ್ಞಾನಧಾರದ ಸ್ಥಿತಿಯೆ ಇವರ ಮತದಲ್ಲಿ ಮೋಕ್ಷವಿರುವದು. ಈ ರೀತಿಯಿಂದ ವಿಜ್ಞಾನವಾದಿ ಬುದ್ಧಿಯೇ ಕ್ಷಣಿಕರೂಪ ಮತ್ತುಸ್ವಯಂ ಪ್ರಕಾಶ ರೂಪ ಕಲ್ಪನಾ ಮಾಡಿ ಆತ್ಮಾ ಎಂದು ಹೇಳುವರು (ವಿ.ಸಾ.ಅಂಕ ೨೬೫)

ಆತ್ಮಾ ಬುದ್ಧಿಯಲ್ಲ (ವಿ.ಸಾ.ಟಿ. ೨೧೨)

೧) ಆತ್ಮಾ ಆನಂದಮಯ ಕೋಶ

(ಪೂರ್ವಮೀಮಾಂಶಾ ವಾರ್ತಿಕ ಕಾರ ಭಟ್ಟ ಹೀಗೆ ಹೇಳಿರುವವರು) (ವಿ.ಸಾ.ಅಂಕ ೨೬೬) ವಿದ್ಯುತ್‌ದಂತೆ ಕ್ಷಣಿಕ ರೂಪ ಆತ್ಮನಲ್ಲ ಕಿಂತು ಸ್ಥಿರ ಸ್ವರೂಪ ಆತ್ಮಾ ಜಡಸ್ವರೂಪ ಮತ್ತು ಚೇತನ ರೂಪ ಇರುವನು. ಇದು ಅವರ ಅಭಿಪ್ರಾಯ ಸುಷುಪ್ತಿಯಿಂದ ಜಾಗ್ರತಪುರುಷ ಹೀಗೆ ಹೇಳುತ್ತಾನೆ ನಾನು ಜಡವಾಗಿ ಮಲಗಿದ್ದೆ ಎನ್ನುತ್ತಾನೆ ಆದ್ದರಿಂದ ಆತ್ಮ ಜಡರೂಪ ಇರುವನು ಮತ್ತು ಜಾಗ್ರತದಲ್ಲಿ ಸ್ಮೃತಿಯುಂಟಾಗುವದು ಅಜ್ಞಾನದ ಸ್ಮೃತಿಯುಂಟಾಗುವದಿಲ್ಲ ಆತ್ಮಸ್ವರೂಪದಿಂದ ಭಿನ್ನಜ್ಞಾನದ್ದು ಸುಷುಪ್ತಿಯಲ್ಲಿ ಬೇರೆ ಸಾಧನವಿಲ್ಲ. ಆದ್ದರಿಂದ ಸ್ಮೃತಿಗೆ ಕಾರಣವಾಗಿದ್ದು ಸುಷುಪ್ತಿಯಲ್ಲಿ ಜ್ಞಾನವಿರುವದು ಅದು ಆತ್ಮನ ಸ್ವರೂಪವೆ ಇರುವದು. ಈ ರೀತಿಯಿಂದ ಆತ್ಮಾ ಖದ್ಯೋತ (ಹೊನ್ನಿ ಹುಳ ಅಥವಾ ಮಿಂಚು ಹುಳ)ದಂತೆ ಆತ್ಮಾಪ್ರಕಾಶ ಮತ್ತು ಅಪ್ರಕಾಶ ರೂಪದಿಂದ ಇರುವನು.

೧) ಜ್ಞಾನರೂಪ ನಿರುವದರಿಂದ ಪ್ರಕಾಶರೂಪನು ಇರುವನು ಮತ್ತು

೨) ಜಡರೂಪನಿರುವದರಿಂದ ಅಪ್ರಕಾಶ ರೂಪ ನಿರುವನು. ಅಪ್ರಕಾಶ, ಪ್ರಕಾಶ ಆನಂದಮಯ ಕೋಶವಿರುವದು. ಏಕೆಂದರೆ ಚೇತನದ ಅಭಾಸ ಸಹಿತ ಯಾವ ಅಜ್ಞಾನ ಅದಕ್ಕೆ ಆನಂದಮಯ ಕೋಶವೆಂದು ಹೇಳುವರು. ಆಲ್ಲಿ ಅಭಾಸನಾದರೂ ಪ್ರಕಾಶರೂಪ ಮತ್ತು ಅಜ್ಞಾನ ಅಪ್ರಕಾಶರೂಪವಿರುವದು. ಆದ್ದರಿಂದ ಭಟ್ಟನ ಮತದಲ್ಲಿ ಆನಂದಮಯ ಕೋಶವೇ ಆತ್ಮಾವಿರುವದು.

೨) (ವಿ.ಸಾ.ಅಂಕ ೨೬೭) (ಮಾಧ್ಯಮಿಕ ಶೂನ್ಯವಾದಿ ಬೌದ್ಧನಮತ)ಶೂನ್ಯವಾದಿ ಬೌದ್ಧ ಹೀಗೆ ಹೇಳಿರುವನು ಆತ್ಮ ನಿರಂಶನಿರುವನು ಆದ್ದರಿಂದ ಒಬ್ಬ ಆತ್ಮನಿಗೆ ಪ್ರಕಾಶ ರೂಪ ಮತ್ತು ಅಪ್ರಕಾಶ ರೂಪ ಹೇಳುವದು ಸಂಭವಿಸುವದಿಲ್ಲ. ಖದ್ಯೋತ (ಮಿಂಚುಹುಳ)ವಾದರೂ ಒಂದು ಅಂಶ ಪ್ರಕಾಶ ರೂಪವಿರುವದು ಎರಡನೇ ಅಂಶ ಅಪ್ರಕಾಶರೂಪ ವಿರುವದು ಅದರಂತೆ ಅಂಶರಹಿತ ಆತ್ಮನಲ್ಲಿ ಉಭಯರೂಪ ಹೇಳುವದು ಅಸಂಗತವಿರುವದು ಆದ್ದರಿಂದ

೧) ಉಭಯರೂಪದ ಸಿದ್ಧಿಯಾಗುವದಗೋಸ್ಕರ ಆತ್ಮಾ ಅಂಶರಹಿತವೆಂದೇ ಅಂಗೀಕಾರ ಮಾಡಬೇಕಾಗುವದು.

೨) ಯಾವ ಅಂಶವುಳ್ಳ ಘಟಾದಿಗಳು ಇರುವವು ಅವು ಉತ್ಪತ್ತಿನಾಶವುಳ್ಳವುಗಳಿರುವವು. ಅದರಂತೆ ಆತ್ಮನಾದರೂ ಅಂಶ ಸಹಿತ ಎಂದು ಹೇಳಿದರೆ ಉತ್ಪತ್ತಿನಾಶವುಳ್ಳವನೆಂದು ಅಂಗೀಕಾರ ಮಾಡಬೇಕಾಗುವದು. ಯಾವ ಉತ್ಪತ್ತಿಯುಳ್ಳ ಪದಾರ್ಥವು ಉತ್ಪತ್ತಿಯಿಂದ ಮೊದಲು ಮತ್ತು ನಾಶದ ನಂತರ ಅಸತ್ ಇರುವದು ಯಾವದು ಆದಿ ಅಂತ್ಯದಲ್ಲಿ ಅಸತ್ ಇರುವದು ಅದು ಮಧ್ಯದಲ್ಲಿಯೂ ಸತ್ ಇರುವದಿಲ್ಲ ಕಿಂತು ಅಸತ್ತು ಇರುವದು. ಆದ್ದರಿಂದ ಆತ್ಮಾ ಅಸತ್ ರೂಪನಾಗಿರುವನು ಅದರಂತೆ ಆತ್ಮನಿಂದ ಬಿನ್ನವಾದರೂ ಸಂಪೂರ್ಣ ಪದಾರ್ಥ ಉತ್ಪತ್ತಿನಾಶವುಳ್ಳವುಗಳಿರುವವು. ಆದ್ದರಿಂದ ಅಸತ್ ಇರುವವು ಈ ರೀತಿಯಿಂದ ಆತ್ಮಾ ಮತ್ತು ಅನಾತ್ಮ ಸಮಗ್ರ ವಸ್ತು ಅಸತ್ ರೂಪ ವಿರುವದರಿಂದ ಶೂನ್ಯ ವೇಪರತತ್ವವಿರುವದು (ಇದು ಶೂನ್ಯವಾದಿ ಮಾಧ್ಯಮಿಕ ಬೌದ್ಧನ ಮತ) ಇದಾದರೂ ಅಜ್ಞಾನರೂಪ ಆನಂದಮಯಕೋಶವನ್ನು ಪ್ರತಿಪಾದನ ಮಾಡಿರುವದು ಏಕೆಂದರೆ ಅಜ್ಞಾನ ಮೂರು ರೂಪದಿಂದ ಪ್ರತೀತವಾಗುವದು

೧) ಅದ್ವೈತ ಶಾಸ್ತ್ರಸಂಸ್ಕಾರ ರಹಿತ ಯಾವ ಮೂಢರಿಗೆ ಜಗದ್ರೂಪ ಪರಿಣಾಮವು ಪ್ರಾಪ್ತವಾಗಿ ಈ ಅಜ್ಞಾನ ಸತ್ಯವಾಗಿ ತೋರುವದು ಮತ್ತು

೨) ಅದ್ವೈತ ಶಾಸ್ತ್ರದ ಅನುಸಾರಯುಕ್ತ ನಿಪುಣ ಪಂಡಿತರಿಗೆ ಸತ್ ಅಸತ್ ವಿಲಕ್ಷಣ ಅನಿರ್ವಚನೀಯ ರೂಪ ಅಜ್ಞಾನ ಮತ್ತು ಅದರ ಕಾರ್ಯಜಗತ್ತು ಪ್ರತೀತಿ ಯಾಗುವುದು ೩) ಜ್ಞಾನ ನಿಷ್ಠರಿಗೆ ಪ್ರಾಪ್ತವಾದ ಜೀವನ್ಮುಕ್ತ ವಿದ್ವಾನರಿಗೆ ಕಾರ್ಯಸಹಿತ ಅಜ್ಞಾನ ತುಚ್ಚರೂಪದಿಂದ ಪ್ರತೀತಿಯಾಗುವದು. ತುಚ್ಚ-ಅಸತ್ತು ಶೂನ್ಯ ಈ ಮೂರು ಶಬ್ದ ಒಂದೇ ಅರ್ಥವನ್ನು ಹೇಳಿದೆ ಈ ರೀತಿಯಿಂದ ಜೀವನ್ಮುಕ್ತರು ಇವರಿಗೆ ತುಚ್ಚರೂಪ ಯಾವುದು ಪ್ರತೀತಿಯಾಗುವದೊ ಅಜ್ಞಾನ ಅದರಲ್ಲಿ ಮೋಹಿತ ಶೂನ್ಯವಾದಿಯು ಪರಮ ಪುಷಾರ್ಥವನ್ನು ತಿಳಿದಿರುವದಿಲ್ಲ ಕಿಂತು ತುಚ್ಚರೂಪ ಆನಂದಮಯ ಕೋಶವೆ ಆತ್ಮ ಎಂದು ಹೇಳಿರುವರು.

ಆತ್ಮಾ ಆನಂದಮಯ ಕೋಶ (ಪ್ರಭಾಕರ ಮತ್ತು ನೈಯಾಯಿಕರ ಮತ)

ಪೂರ್ವ ಮೀಮಾಂಸಾ ಏಕದೇಶಿ ಪ್ರಭಾಕರ ಮತ್ತು ನೈಯಾಯಿಕರು ಹೀಗೆ ಹೇಳಿರುವರು (ವಿ.ಸಾ. ಅಂಕ ೨೬೮) ಆತ್ಮಾ ಶೂನ್ಯರೂಪವಲ್ಲ ಏಕೆಂದರೆ ಶೂನ್ಯರೂಪ ಆತ್ಮಾ ಎಂದು ತಿಳಿದವನಿಗೆ ಹೀಗೆ ಕೇಳಬೇಕು ಶೂನ್ಯರೂಪವನ್ನು ನೀನು ಅನುಭವ ಮಾಡಿರುವಿಯೋ? ಇಲ್ಲವೋ ಅವನು ಹೇಳಿದ ಶೂನ್ಯವನ್ನು ಅನುಭವ ಮಾಡಿದ್ದೆನೆ ಎಂದರೆ ಆತ್ಮಾ ಶೂನ್ಯದಿಂದ ವಿಲಕ್ಷಣವಿದೆ ಎಂದು ಸಿದ್ಧವಾಗುವದು:

೧) ಶೂನ್ಯವನ್ನು ಅನುಭವಮಾಡಿಲ್ಲವೆಂದರೆ ಶೂನ್ಯವೇ ಇಲ್ಲವೆಂದೆಂತಾಗುವದು ಈ ರೀತಿಯಿಂದ ಆತ್ಮಾ ಶೂನ್ಯದಿಂದ ವಿಲಕ್ಷಣನೆಂದು ಮತ್ತು ಅವನಲ್ಲಿ ಮನದ ಸಂಯೋಗದಿಂದ ಜ್ಞಾನವಾಗುವದು.

೨) ಅಜ್ಞಾನಗುಣದಿಂದ ಆತ್ಮಾಚೇತನವೆಂದು ಹೇಳಿರುವದು ಮತ್ತು

೩) ಸ್ವರೂಪದಿಂದ ಆತ್ಮಾ ಜಡ ಇರುವದು.

೪) ಅದರಂತೆ ಸುಖ ದುಃಖ ಇಚ್ಛಾ, ದ್ವೇಷ, ಪ್ರಯತ್ನಧರ್ಮ, ಅಧರ್ಮಾಧಿಕ ಗುಣಗಳು ಆತನಲ್ಲಿ ಇರುವವು. ಇವರ ಮತದಲ್ಲಿ ಯಾದರು ಆನಂದಮಯ ಕೋಶವೇ ಆತ್ಮನೆಂದು ಹೇಳಿರುವರು. ಮತ್ತು ವಿಜ್ಞಾನಮಯ ಕೋಶದಲ್ಲಿ ಯಾವ ಬುದ್ಧಿ ಇರುವದು ಅದು ಆತ್ಮನ ಅಜ್ಞಾನ ಗುಣವೆಂದು ಹೇಳಿರುವರು. ಏಕೆಂದರೆ ಆನಂದಮಯ ಕೋಶದಲ್ಲಿ ಚೇತನ ಗೂಢ (ರಹಸ್ಯ)ವಾಗಿರುವದು. ವಿವೇಕ ಹೀನರಿಗೆ ಪ್ರತೀತಿಯಾಗುವದಿಲ್ಲ ಮತ್ತು ಪ್ರಭಾಕರ ಅಥವಾ ನೈಯಾಯಿಕರು ಆತ್ಮನು ಸುಷುಪ್ತಿಯಲ್ಲಿ ಜ್ಞಾನಹೀನವೆಂದು ಅಂಗೀಕಾರ ಮಾಡಿ ಸ್ವರೂಪದಿಂದ ಜಡವೆಂದು ಹೇಳಿರುವರು. ಆದ್ದರಿಂದ ಗೂಢವಾದ ಚೇತನ ಆನಂದಮಯಕೋಶದಲ್ಲಿಯೇ ಅವರಿಗೆ ಆತ್ಮಭ್ರಾಂತಿಯಿರುವದು. ಮತ್ತು ಆತ್ಮ ಸ್ವರೂಪ ನಿತ್ಯ ಜ್ಞಾನವನ್ನಾದರೂ ಜೀವನದಲ್ಲಿ ಅಂಗೀಕಾರ ಮಾಡಿಲ್ಲ ಕಿಂತು ಅನಿತ್ಯ ಜ್ಞಾನ ಅಂಗೀಕಾರ ಮಾಡಿದ್ದಾರೆ. ಆ ಅನಿತ್ಯ ಜ್ಞಾನ ಸಿದ್ಧಾಂತದಲ್ಲಿ ಅಂತಃಕರಣದ ಬುದ್ಧಿರೂಪ ವೃತ್ತಿ ಇರುವದು. ಈ ರೀತಿಯಿಂದ ಪ್ರಭಾಕರ ನೈಯಾಯಿಕ ಮತದಲ್ಲಿ ಆನಂದಮಯ ಕೋಶವೇ ಆತ್ಮ ಇರುವದು. ಮತ್ತು ಬುದ್ಧಿ ಅದರ ಗುಣವಿರುವದು.

ಇವರ ಮತವಾದರು ಸಮೀಚೀನವಲ್ಲ ಏಕೆಂದರೆ

ಆತ್ಮಾ

೧) (ವಿ.ಸಾ.ಅಂಕ ೨೬೯) ಜ್ಞಾನದಿಂದ ಭಿನ್ನ ಯಾವ ಜಡವಸ್ತು ಘಟಾದಿಗಳಿರುವವು. ಅವು ಅನಿತ್ಯವಿರುವವು ಅದರಂತೆ ಆತ್ಮನಾದರೂ ಜ್ಞಾನ ಸ್ವರೂಪನಾಗದಿದ್ದರೆ ಘಟಾದಿಗಳಂತೆ ಜಡವಾಗುವದರಿಂದ ಅನಿತ್ಯವಾಗಬೇಕಾಗುವದು.

೨) ಯಾವ ಆತ್ಮಾ ಅನಿತ್ಯ ಆದದ್ದಾದರೆ ಮೋಕ್ಷಾರ್ಥ ಸಾಧನಗಳು ನಿಷ್ಫಲವಾಗುವವು. ಈ ರೀತಿಯಿಂದ ವೇದಾಂತವಾಕ್ಯದಲ್ಲಿ ವಿಶ್ವಾಸವಿಲ್ಲದವರು ಅನೇಕ ಬಹಿರ್ಮುಖ.

೩) ಪಂಚಕೋಶಗಳಲ್ಲಿಯೆ ಯಾವದೋ ಒಂದು ಪದಾರ್ಥವನ್ನು ಆತ್ಮಾ ಎಂದು ಅಂಗೀಕಾರ ಮಾಡಿದ್ದಾರೆ. ಮತ್ತು ಮುಖ್ಯ ಆತ್ಮಾಸ್ವರೂಪವಾದ ಸಾಕ್ಷಿಯನ್ನು ಆತ್ಮಾ ಎಂದು ತಿಳಿದಿಲ್ಲ ಅನ್ನಮಯಾದಿಕೋಶಗಳು ಆತ್ಮನನ್ನು ಆಚ್ಛಾದಕ ಅಂದರೆ ಕಾಣಗೊಡದಂತೆ ಮಾಡಿರುವವು ಆದ್ದರಿಂದ ಅವುಗಳಿಗೆ ಕೋಶವೆಂದು ಹೇಳುವರು. ಹೀಗೆ ಜೀವನ ಪಂಚಕೋಶಗಳು ಜೀವನ ಯತಾರ್ಥ ಸ್ವರೂಪ ಸಾಕ್ಷಿಯನ್ನು ಆಚ್ಛಾದನ ಮಾಡಿರುವವು. ಅದರಂತೆ ಈಶ್ವರನ ಸಮಷ್ಠಿಪಂಚಕೋಶಗಳು ಈಶ್ವರನ ಯಥಾರ್ಥ ಸ್ವರೂಪವಾದ ಬ್ರಹ್ಮವನ್ನು ಆಚ್ಛಾದನ ಮಾಡಿರುವವು. ಏಕೆಂದರೆ ತತ್ ಪದದ ಲಕ್ಷಣ ಇರುವದು ಅದನ್ನು ತ್ಯಾಗ ಮಾಡಿ ಕೆಲವು ಅವಿವೇಕಿಗಳು ಮಾಯಾ ರೂಪ ಆನಂದಮಯ ಕೋಶ ವಿಶಿಷ್ಠ ಯಾವ ಅಂತರ್ಯಾಮಿ ತತ್ ಪದದ ವಾಚ್ಚವನ್ನೇಪರ ಮತತ್ವವೆಂದು ಹೇಳಿರುವರು. ಅದರಂತೆ ಹಿರಣ್ಯಗರ್ಭ ವೈಶ್ವಾನರ ವಿಷ್ಣು, ಬ್ರಹ್ಮ, ಶಿವ, ಗಣೇಶ, ದೇವಿ ಮತ್ತು ಸೂರ್ಯನಿಂದ ಮೊದಲುಗೊಂಡು ಅಶ್ವತ್ಥ, ಮುದ್ದಾಲಕ, ಕಪಿಲ, ಅರ್ಕ (ಬಿದಿರು) ಇವೆಲ್ಲ ಪದಾರ್ಥಗಳಲ್ಲಿ ಪರಮಾತ್ಮನೆಂಬ ಬ್ರಾಂತಿ ಮಾಡಿದ್ದಾರೆ.

ಯದ್ಯಪಿ : ಸರ್ವಪದಾರ್ಥಗಳಲ್ಲಿ ಲಕ್ಷಭಾಗ ಪರಮಾತ್ಮನಿಂದ ಭಿನ್ನವಿಲ್ಲವಾದರೂ ತಥಾಪಿ:- ಆಯಾಯ ಉಪಾದಿಯಿಂದ ಕೂಡಿದ್ದರಿಂದ ಅದು ಪರಮಾತ್ಮನೆಂದು ಅಂಗೀಕರಿಸಿದ್ದಾರೆ ಅದು ಅವರ ಬ್ರಾಂತಿ ಇರುವದು ಈ ರೀತಿಯಿಂದ

೧) ಪಂಚಕೋಶಗಳಿಂದ ಯಾವ ಜೀವ ಈಶ್ವರ ಪರಮಾರ್ಥ ಸ್ವರೂಪ ಅದರಿಂದ ಆತ್ಮ ಬಲ ವಿಮುಖವುಂಟಾಗಿ ದೇಹಾದಿಗಳಲ್ಲಿ ಆ ಬ್ರಾಂತಿ ಮಾಡಿ ಪುಣ್ಯಪಾಪ ಕರ್ಮ ಮಾಡುವರು ಮತ್ತು

೨) ಅಂತರ್ಯಾಮಿಯಿಂದ ಮೊದಲುಗೊಂಡು ವಂಶಪರ್ಯಂತ ಈಶ್ವರ ರೂಪವನ್ನೇ ಅಂಗೀಕರಿಸಿ ಆರಾಧನಾ ಮಾಡಿ ಸುಖ ಬೇಡುವರು ಹೇಗೆ ಉಪಾದಿ ಆರಾಧನಾ ಮಾಡುವರು. ಅದರ ಅನುಸಾರವೇ ಅವರಿಗೆ ಫಲ ದೊರೆಯುವದು ಏಕೆಂದರೆ ಸೂಕ್ಷ್ಮ ಸ್ಥೂಲ ಪ್ರಪಂಚ ಎಲ್ಲಾ ಈಶ್ವರನ ಮೂರು ಶರೀರದಲ್ಲಿ ಅಂತರ್ಭೂತ ವಿರುವವು. ಅದರಲ್ಲಿ ಉಪಾಸನಾ ಅನುಸಾರವಾಗಿ ಫಲವಾದರೂ ಸರ್ವವೂ ಉಂಟಾಗುವದು. ಪರಂತು ಬ್ರಹ್ಮಜ್ಞಾನದ ಹೊರತಾಗಿ ಮೋಕ್ಷ ಉಂಟಾಗುವದಿಲ್ಲ. ಯಾವ ಮೋಕ್ಷದ ಇಚ್ಛಾವುಳ್ಳವರಾಗಿದ್ದರೆ ಜೀವ ಈಶ್ವರರ ಸ್ವರೂಪವನ್ನು ಪಂಚಕೋಶಗಳಿಂದ ಬೇರ್ಪಡಿಸಬೇಕು.

ಆತ್ಮಾ

(ವಿ.ಸಾ.ಅಂಕ.೨೭೦) ಸ್ವಪ್ನಾವಸ್ಥೆಯಲ್ಲಿ ಸ್ಥೂಲ ದೇಹದ ಪ್ರತೀತಿಯಾಗುವದಿಲ್ಲ. ಆತ್ಮಾ ಪ್ರತೀತಿಯಾಗುವನು ಅದರಂತೆ ಸುಷುಪ್ತಿ ಅವಸ್ಥೆಯಲ್ಲಿ ಸೂಕ್ಷ್ಮ ಶರೀರದ ಜ್ಞಾನವಿರುವದಿಲ್ಲ. ಮತ್ತೆ ಸುಖ ಸ್ವರೂಪ ಆತ್ಮಾ ಸ್ವಯಂ ಪ್ರಕಾಶದಿಂದ ಪ್ರತೀತಿಯಾಗುವನು. ಸುಖದ ಜ್ಞಾನ ಸುಷುಪ್ತಿಯಲ್ಲಿ ಇಲ್ಲದಿದ್ದರೆ ನಾನು ಸುಖದಿಂದ ಮಲಗಿದ್ದೆಎಂದು ಹೀಗೆ ಜಾಗ್ರಾವಸ್ಥೆಯಲ್ಲಿಸ್ಮೃತಿ ಉಂಟಾಗಬಾರದಾಗಿತ್ತು. ಆದ್ದರಿಂದ ಸುಖದ ಜ್ಞಾನ ಶುಷುಪ್ತಿಯಲ್ಲಿ ಇರುವದು.ಆ ಸುಖ ವಿಷಯ ಜನ್ಯವಾಗಿದ್ದರೆ ಸುಷುಪ್ತಿಯಲ್ಲಿ ಇರಬಾರದಾಗಿತ್ತು ಇರುತ್ತದೆ. ಆದ್ದರಿಂದ ಆತ್ಮ ಸುಖ ಸ್ವರೂಪವೇ ಇದ್ದಾನೆ ಆ ಆತ್ಮಾ ಸ್ವಯಂ ಪ್ರಕಾಶ ಇದ್ದಾನೆ ಆದ್ದರಿಂದ ಸುಖರೂಪ ಆತ್ಮಾ ಸ್ವಯಂ ಪ್ರಕಾಶ ರೂಪದಿಂದ ಸುಷುಪ್ತಿಯಲ್ಲಿ ಭಾಸಿಸುವನು. ಮತ್ತು ನಿಧಿ ಧ್ಯಾಸನದ ಫಲ ನಿರ್ವಿಕಲ್ಪ ಸಮಾಧಿ ಅವಸ್ಥೆಯಲ್ಲಿ ಅಜ್ಞಾನ ಕೃತ ಆವರಣ ರಹಿತ ಆತ್ಮಾ ಭಾಸಿಸುವನು ಕಾರಣ ಶರೀರವಾದ ಅಜ್ಞಾನದಲ್ಲಿ ಭಾಸಿಸುವುದಿಲ್ಲ ಹೀಗೆ ಮೂರು ದೇಹ ವ್ಯಭಿಚಾರಿ ಇರುವವು. ಅವಸ್ಥೆಗಳು ಒಂದರಲ್ಲಿ ಒಂದು ಇರುವುದಿಲ್ಲ. ಆತ್ಮನು ಸರ್ವ ಅವಸ್ಥೆಗಳಲ್ಲಿ ಅನುಗತನಾಗಿ ಬಾಸಿಸುವನು ಆದ್ದರಿಂದ ಆತ್ಮಾವ್ಯಾಪಕನಿರುವನು.

ಆತ್ಮನ ಸಾಮಾನ್ಯ ವಿಶೇಷದಲ್ಲಿ ಶಂಖಾ ಸಮಾಧಾನ :

ಶಂಖಾ:-

(ವಿ.ಸಾ.ಅಂಕ ೮೭) ಆತ್ಮನಲ್ಲಿ ಸಾಮಾನ್ಯ ವಿಶೇಷ ಭಾವ ಇರುವದೇ ಇಲ್ಲ ಆದ್ದರಿಂದ ನಿರ್ವಿಶೇಷ ಆತ್ಮಾ ಜ್ಞಾತಾ ಮತ್ತು ಅಜ್ಞಾತ ಸಂಭವಿಸುವದಿಲ್ಲ.

ಸಮಾಧಾನ:- ಈ ವಾರ್ತೆಯಾದರೂ ಸಂಭವಿಸುವದಿಲ್ಲ ಏಕೆಂದರೆ?

ಆತ್ಮಾ ಇದ್ದಾನೆ (ನಾನಿದ್ದೇನೆ ಅನ್ನುವ ರೀತಿಯಲ್ಲಿ) ಇದು ಎಲ್ಲರಿಗೂ ತೋರುವದು. ಆತ್ಮಾ ಈ ಹೆಸರು ತನ್ನ ಸ್ವರೂಪ ಇರುವದು ನಾನು ಇಲ್ಲ ಎಂದು ಹೀಗೆಯಾರೂ ಅನ್ನುವುದಿಲ್ಲ. ಕಿಂತು ನಾನಿದ್ದೇನೆ ಹೀಗೆ ಎಲ್ಲರಿಗೂ ಉಂಟಾಗುವದು ಆದ್ದರಿಂದ ಸತ್ ರೂಪದಿಂದ ಆತ್ಮಾ ಸರ್ವರಿಗೂ ಬಾನವಾಗುವನು ಮತ್ತು ಆತ್ಮಚೈತನ್ಯ, ಆನಂದರೂಪ, ವ್ಯಾಪಕ ನಿತ್ಯಶುದ್ಧ, ನಿತ್ಯ ಮುಕ್ತ ರೂಪನು ಆತ್ಮನಿದ್ದಾನೆ ಎನ್ನುವದು ಸರ್ವರಿಗೂ ಪ್ರತೀತಿಯಾಗುವದಿಲ್ಲ ಆದ್ದರಿಂದ ಚೈತನ್ಯ ಆನಂದ, ವ್ಯಾಪಕ, ನಿತ್ಯಶುದ್ಧ, ನಿತ್ಯಮುಕ್ತ ರೂಪದಿಂದ ಆತ್ಮಾ ಅಜ್ಞಾತ ಇರುವನು ಮತ್ತು ಸತ್ ರೂಪದಿಂದ ಜ್ಞಾತಾ ಇರುವನು ಈ ವಾರ್ತೆಯು ಅನುಭವಸಿದ್ಧವಿರುವದು ಈ ಅನುಭವಸಿದ್ಧ ವಾರ್ತೆಯು ಯಾವ ಯುಕ್ತಿಯಿಂದಲೂ ದೂರವಾಗುವದಿಲ್ಲ.

೧) ಸರ್ವರಿಗೂ ಪ್ರತೀತಿಯಾಗುವದು ಯಾವದಿರುವದೋ ಅಂಥ ಆತ್ಮನ ಸದ್ರೂಪವು ಸಾಮಾನ್ಯರೂಪದಿಂದ ಇರುವದು.

೨) ಕೇವಲ ಜ್ಞಾನಿಗೆ ಯಾವದು ಪ್ರತೀತಿಯಾಗುವದೋ ಅಂಥ ಚೇತನ ಆನಂದಾದಿಕಗಳು ಇವು ಆತ್ಮನ ವಿಶೇಷ ರೂಪವಿರುವದು.

೧) ಯಾವದು ಅಧಿಕ ಕಾಲದಲ್ಲಿ ಅಧಿಕ ದೇಶದಲ್ಲಿರುವದು ಅದು ಸಾಮಾನ್ಯ ರೂಪು ಎಂದು ಹೇಳಿರುವನು.

೨) ಯಾವದೂ ನ್ಯೂನ ಕಾಲದಲ್ಲಿ ನ್ಯೂನದೇಶದಲ್ಲಿ ಇರುವದು ಅದು ವಿಶೇಷ ರೂಪವೆಂದು ಹೇಳಿರುವದು.

ಯದ್ಯಪಿ

ಆತ್ಮನ ಸ್ವರೂಪವಾದರೂ ಚೇತನ, ಆನಂದಾದಿಕ ಇರುವದು ಆದ್ದರಿಂದ ಸತ್‌ದಂತೆ ಚೇತನ ಆನಂದಾದಿಗಳು ಸರ್ವತ್ರ ವ್ಯಾಪಕವಿರುವವು। ಸತ್ ದ ಅಪೇಕ್ಷೆಯಿಂದ ಚೇತನ ಆನಂದಾದಿಗಳು ನ್ಯೂನದೇಶದಲ್ಲಿ ಮತ್ತು ಚೇತನ ಆನಂದಾದಿಗಳ ಅಪೇಕ್ಷೆಯಿಂದ ಸದ್ರೂಪವು ಅಧಿಕ ದೇಶದಲ್ಲಿ ಹೇಳುವದು ಸಂಭವಿಸುವದಿಲ್ಲ, ಆದ್ದರಿಂದ ಸದ್ರೂಪವು ಆತ್ಮನ ಸಾಮಾನ್ಯ ಅಂಶವು ಚೇತನ ಆನಂದಾದಿಗಳು ವಿಶೇಷ ಅಂಶವೆಂದು ಹೇಳುವದು ಸಮಂಜಸವಲ್ಲ.

ತಥಾಪಿ

ಸತ್ ಪ್ರತೀತಿ ಸರ್ವರಿಗೂ ಅವಿದ್ಯಾಕಾಲದಲ್ಲಿಯಾದರೂ ಉಂಟಾಗುವದು ಪರಂತು ಚೇತನ ಆನಂದರೂಪ ಆತ್ಮಾ ಇದ್ದಾನೆ ಹೀಗೆ ಎಲ್ಲರಿಗೂ ಪ್ರತೀತಿಯಾಗುವದಿಲ್ಲ. ಏಕೆಂದರೆ ಅವಿದ್ಯಾ ಮಹಿಮೆಯಿಂದ ಪ್ರತೀತಿಯಾಗುವದಿಲ್ಲ. ಕೇವಲ ಜ್ಞಾನಿಗೇನೇ ಪ್ರತೀತಿಯಾಗುವದು. ಅವಿದ್ಯಾ ಕಾಲದಲ್ಲಿಯೂ ಆತ್ಮಾ ಚೇತನ, ಆನಂದ, ಮುಕ್ತಾ, ಶುದ್ಧತಾ ಇರುವವು. ಪರಂತು ಪ್ರತೀತಿಯಾಗುವದಿಲ್ಲ. ಆದ್ದರಿಂದ ಇಲ್ಲದಿರುವಂತೆ ತೋರುವದು. ಅದು ಸಮಾನವೇ ಇರುವದು. ಈ ಅಭಿಪ್ರಾಯದಿಂದ

೧) ಚೇತನ ಆನಂದಾದಿಕ ಆತ್ಮನ ವಿಶೇಷಣಗಳು ನ್ಯೂನಕಾಲವೃತ್ತಿಯೆಂದು ಹೇಳಿರುವದು.

೨) ಸದ್ರೂಪವು ಅಧಿಕ ಕಾಲ ವೃತ್ತಿಯೆಂದು ಹೇಳಿರುವದು.

ಈ ರೀತಿಯಿಂದ ಸದ್ರೂಪ ಚೇತನ ಆನಂದಾದಿಗಳಿಗೆ ಸಾಮಾನ್ಯ ವಿಶೇಷ ಭಾವವಿಲ್ಲ ಇರುವದೇ ಇಲ್ಲ ಪರಂತು ಅಲ್ಪಕಾಲ ಅಲ್ಪದೇಶ ಪ್ರತೀತಿಯಾಗುವದರಿಂದ ಸಾಮಾನ್ಯ ವಿಶೇಷ ಭಾವದಂತೆ ಇರುವದು ಈ ಕಾರಣದಿಂದ.

೩) ಆತ್ಮನ ಸದ್ರೂಪವು ಸಾಮಾನ್ಯ ಅಂಶವೆಂದು ಹೇಳಿರುವದು.

೪) ಚೇತನ ಆನಂದಾದಿಕ ವಿಶೇಷ ಅಂಶವೆಂದು ಹೇಳಿರುವದು ಆತ್ಮಾನಿರ್ವಿಶೇಷವೇ ಇರುವನು ಇದು ಸಿದ್ಧಾಂತಕ್ಕೆ ಹಾನಿ ಇಲ್ಲ ಆತ್ಮನಲ್ಲಿ ಸಾಮಾನ್ಯ ವಿಶೇಷಾಂಶ ಅಂಗೀಕರಿಸಿದಿದ್ದಾರೆ ನಿರ್ವಿಶೇಷ ಆತ್ಮನು ಇರುವನು ಎನ್ನುವದು ಸಿದ್ಧಾಂತಕ್ಕೆ ಹಾನಿ ಬರುತ್ತಿತ್ತು. ಸಾಮಾನ್ಯ ವಿಶೇಷಾಂಶ ಅಂಗೀಕಾರ ಮಾಡುವದೇ ಇಲ್ಲ ಅಂದ ಮೇಲೆ ಇದು ಅವಿದ್ಯಾದಿಂದ ಸಾಮಾನ್ಯ ವಿಶೇಷದಂತೆ ಪ್ರತೀತಿಯಾಗುವದು ಆದ್ದರಿಂದ ಸಾಮಾನ್ಯ ವಿಶೇಷ ಭಾವ ಹೇಳಿರುವದು.

ಆತ್ಮಾ:

(ವಿ.ಸಾ.ಅಂಕ ೩೬೪) ಆತ್ಮಾ ಸಚ್ಚಿದಾನಂದ ರೂಪವೇ ಇರುವನು. ಸಚ್ಚಿದಾನಂದ ಪರಸ್ಪರ ಭಿನ್ನವಿಲ್ಲ ಕಿಂತು ಒಂದೇ ಇರುವದು. ಯಾವ ಆತ್ಮನಿಗೆ ಗುಣ ಇರುತ್ತಿದ್ದರೆ ಪರಸ್ಪರ ಭಿನ್ನವೂ ಇರುತ್ತಿತ್ತು ಆತ್ಮಾಸ್ವರೂಪವಿರುವದು ಆದ್ದರಿಂದ ಭಿನ್ನವಿಲ್ಲ.

೧) ಆತ್ಮಾ ಒಬ್ಬನೇ ನಿವೃತ್ತಿ ರಹಿತ ಇರುವನು ಆದ್ದರಿಂದ ಸತ್ ಎಂದು ಹೇಳಿರುವದು.

೨) ಜಡದಿಂದ ವಿಲಕ್ಷಣ ಪ್ರಕಾಶರೂಪನಿರುವನು ಆದ್ದರಿಂದ ಚಿತ್ತು ಎಂದು ಹೇಳಿದೆ.

೩) ದುಃಖದಿಂದ ವಿಲಕ್ಷಣ ಮುಖ್ಯ ಪ್ರೀತಿಗೆ ವಿಷಯವಿರುವನು ಆದ್ದರಿಂದ ಆನಂದವೆಂದು ಹೇಳಿರುವರು.

ಆತ್ಮಾ: ಸಚ್ಚಿತ್ ಆನಂದ ರೂಪವೇ ಶಾಸ್ತ್ರದಲ್ಲಿ ಬ್ರಹ್ಮವೆಂದು ಹೇಳಿರುವರು. ಆದ್ದರಿಂದ ಬ್ರಹ್ಮಸ್ವರೂಪವೇ ಆತ್ಮಾ ಇರುವನು. ಆತ್ಮನಿಂದ ಬ್ರಹ್ಮವು ಬಿನ್ನವೆಂದು ಹೇಳಿದ್ದಾದರೆ ಅನಾತ್ಮಾ ಆಗುವದು ಯಾವ ಅನಾತ್ಮಾ ಘಟಾದಿಗಳಿರುವವು ಅವು ಜಡ ಇರುವವು ಆದ್ದರಿಂದ ಆತ್ಮನಿಂದ ಭಿನ್ನವೆಂದು ಹೇಳಿಧರೆ ಬ್ರಹ್ಮವೂ ಜಡವೇ ಆಗುವದು. ಆದ್ದರಿಂದ ಆತ್ಮನಿಗಿಂತ ಬಿನ್ನ ಬ್ರಹ್ಮವೂ ಇಲ್ಲ ಕಿಂತು ಬ್ರಹ್ಮಸ್ವರೂಪವೇ ಆತ್ಮಾ ಇರುವನು.

೧) ಆತ್ಮಾ: ಚೇತನ ಒಂದೇ ಸರ್ವ ಪ್ರಪಂಚ ಮತ್ತು ಮಾಯೆಗೆ ಅಧಿಷ್ಠಾನವಿರುವುದು ಆದ್ದರಿಂದ ಬ್ರಹ್ಮವೆಂದು ಹೇಳಿರುವದು.

ಆತ್ಮಾ

೧) (ಪಂಚದರ್ಶಿ ಪ್ರ.೬ ಶ್ಲೋ-೬೦) ಕೂಟ ಸ್ಥಾದಿ ಶರೀರಾಂತ ಸಂಘಾತ ಸ್ವಾತ್ಮತಾಂಜಗು ಲೋಕಾಯುತಃ ಪಾಮರಾಶ್ಚಪ್ರತ್ಯಕ್ಷಾ ಭಾಸ ಮಾಶ್ರಿತಾಃ।

ಅರ್ಥ : ಲೋಕಾಯುತರು ಪಾಮರರೂ ಪ್ರತ್ಯಕ್ಷ ಅಭಾಸವನ್ನು (ಪ್ರತ್ಯಕ್ಷಸಿದ್ಧವಾಗಿರುವ ಸ್ಥೂಲ ದೇಹವೂ ಬಾಧಿತವಾಗುವದರಿಂದ ಪ್ರತ್ಯಕ್ಷಾಭಾಸವನ್ನು) ಆಶ್ರಯಿಸಿದವರಾಗಿ ಕೂಟಸ್ಥನಿಂದ ಪ್ರಾರಂಭಿಸಿ ಸ್ಥೂಲ ಶರೀರವೇ ಕೊನೆಯಾಗಿರುವ ಸಂಘಟತಕ್ಕೆ ಆತ್ಮಭಾವವನ್ನುಹೇಳುವರು.

೨) (ಪಂ.ಶ್ಲೋ.೬೧) ಶೌತ್ರಿ ಕರ್ತುರ್ ಸ್ವಪಕ್ಷಂತೇ ಕೋಶ ಮನ್ನಮಯಂ ತಥಾ। ವಿರೋಚನಸ್ಯ ಸಿದ್ಧಾಂತಂ ಪ್ರಮಾಣಂ ಪ್ರತಿಜ್ಞಿರೇ।

(೬೧) ಆಲೋಕಾಯುತರೇ ಮೊದಲಾದವರು ತಮ್ಮ ಪಕ್ಷವನ್ನು ಶೃತಿ ಸಮ್ಮತವಾಗಿ ಮಾಡುವದಕ್ಕಾಗಿ ಆತ್ಮನು ಅನ್ನಮಯನು ಇವೆ ಮೊದಲಾದ ಶೃತಿ ವಾಕ್ಯ (ಆ ಈ ಪರುಷನು ಅನ್ನಮಯನು ಸ.ವಾ.ಏಷಪರುಷೊನ್ನ-ರಸಮಯಃ. (ತೈ.ಉ.೨-೧) ವೇ ಮೊದಲಾದ ಶೃತಿ ವಾಕ್ಯಗಳನ್ನು ಉದಾಹರಿಸುತ್ತಾರೆ ಇದು ವಿರೋಚನಸಿದ್ಧಾಂತ ವಿರೋಚನನು ಪ್ರಜಾಪತಿಯ ವಾಕ್ಯವನ್ನು ತಪ್ಪಾಗಿ ತಿಳಿದುಕೊಂಡು ದೇಹಾತ್ಮಾವಾದವನ್ನು ಅಸುರರಿಗೆ ಉಪದೇಶಿಸಿದ್ದಾನೆಂದು ಪ್ರಜಾಪತಿ ವಿದ್ಯೆಲ್ಲಿ (ಛಾ.ಉ.೮.೮)ಹೇಳಿದೆ.

(ಪಂ.ದ.ಶ್ಲೋ.೬೨) ಜೀವಾತ್ಮ ನಿರ್ಗಮೇ ದೇಹ ಮರಣಶ್ಯಾತ್ರ ದರ್ಶನಾತ್ ದೇಹಾತಿ ರಿಕ್ತ ಏವಾತ್ಮೆತ್ಯು ಲೋಕಾಯುತಾಃ ಪರೇ। (೬೨( ಜೀವಾತ್ಮನು ಹೋಗುತ್ತಿರುವಾಗ ಸ್ಥೂಲದೇಹದ ನಾಶವು ಪ್ರತ್ಯಕ್ಷವಾಗಿ ತೋರುವದರಿಂದ ಆತ್ಮನು ಶರೀರಕ್ಕಿಂತ ಬೇರೆಯವನಾಗಿರಬೇಕು ಎಂದು ಇತರ ಲೋಕಾಯುತರು ಹೇಳುತ್ತಾರೆ. ದೇಹಕ್ಕಿಂತ ಬೇರೆಯಾದ ಆತ್ಮನು ಇಂದ್ರಿಯಾತ್ಮ (ಇಂದ್ರಿಯಾತ್ಮವಾದಿ) (ಪಂ.ಶ್ಲೋ.೬೩) ಪ್ರತ್ಯಕ್ಷತ್ವೇ ನಾಭಿ ಮತಾಹಂದೀರ್ದೆ ಹಾತಿರೇ ಕಿಣಮ್। ಗಮಯೇಂದ್ರಿಯಾತ್ಮಾನಂ ವಚ್ಮೀತ್ಯಾದಿ ಪ್ರಯೋಗತಃ (೬೩) ನಾನು ನುಡಿಯುತ್ತೇನೆ ನಾನು ನೋಡುತ್ತೇನೆ ಇದೇ ಮೊದಲಾದ ಪ್ರಯೋಗವಿರುವದರಿಂದ ಪ್ರತ್ಯಕ್ಷ ಭಾವದಿಂದ ಸಮ್ಮತವಾದ ನಾನು ಎಂಬ ಜ್ಞಾನವು ದೇಹಕ್ಕಿಂತ ಭಿನ್ನವಾದ ಇಂದ್ರಿಯವನ್ನೇ ಆತ್ಮನೆಂದು ತಿಳಿಸುವದು.

ಪ್ರಾಣವೇ ಆತ್ಮ

ಪ್ರಾಣಾತ್ಮವಾದಿಯಮತ (ಪಂ.ದ.ಪ್ರ.೬ ಶ್ಲೋ.೬೫) ಹೈರಣ್ಯಗ ಭಾಃ ಪ್ರಾಣಾತ್ಮವಾದಿ ನಸ್ತ್ವೇವ ಮೂಚಿರೇ ಚಕ್ಷುರಾಧ್ಯಕ್ಷಲೋಪೇ ಪಿ ಪ್ರಾಣ ಸತ್ತ್ವೇತು ಜೀವತಿ (೬೫) ಕಣ್ಣು ಮೊದಲಾದ ಇಂದ್ರಿಯಗಳು ಲೋಪ ಹೊ ದಿದ್ದರೂ ಪ್ರಾಣವಿದ್ದರೆ ಮನುಷ್ಯನು ಬದುಕಿರುತ್ತಾನೆ ಎಂದು ಪ್ರಾಣವನ್ನೆ ಆತ್ಮನೆಂದು ವಾದಿಸುವ ಹಿರಣ್ಯಗರ್ಭೋಪಾಸಕರು ಹೇಳುತ್ತಾರೆ ಪ್ರಾಣಾತ್ಮವನ್ನು ಸಾಧಿಸಲು ಶೃತಿಗಳನ್ನು ಉದಾಹರಿಸುತ್ತಾರೆ-

(ಪಂ.ದ. ಪ್ರ.೬ ಶ್ಲೋ.೬೬) ಪಾಣೋಜಾಗರ್ತಿ ಸುಪ್ತೇಪಿ ಪ್ರಾಣ ಶ್ರೈಷ್ಠಾಧಿಕಂ ಶ್ರುತಂ। ಕೋಶಃ ಪ್ರಾಣಮಯಃ ಸಮ್ಯಗ್ವಿಸ್ತರೇಣ ಪ್ರಪಂಚಿತಃ ಅರ್ಥ ಪ್ರಾಣವು ಸುಷುಪ್ತಿಯಲ್ಲಿಯೂ ಎಚ್ಚರವಾಗಿರುವದು (ಈ ಶರೀರದಲ್ಲಿ ಪಾಣಾಗ್ನಿಗಳೇ

ಎಚ್ಚತ್ತಿರುವವು. ಪ್ರಾಣಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ (ಪ್ರ.ಉ.೪೩) ಪ್ರಾಣದ ಶ್ರೇಷ್ಠತ್ವವನ್ನು ಶ್ರುತಿಯಲ್ಲಿ ಹೇಳಿದೆ (ಬ್ರ.ಉ.೧-೫-೨೧ ನೋಡಿರಿ) ಮತ್ತು ಶ್ರುತಿಗಳು ಪ್ರಾಣಮಯಕೋಶವನ್ನು ಚನ್ನಾಗಿಯೂ ವಿಸ್ತಾರವಾಗಿಯೂ ವಿವರಿಸಿವೆ. ಈ ಅನ್ನರಸಮಯನಾದ ಆತ್ಮನಿಗಿಂತ ಬೇರೆಯವನೂ ಅಂತರನೂ ಪ್ರಾಣಮಯನು ಆದ ಆತ್ಮನಿರುವನು। ತಸ್ಮಾದ್ವಾ ತಸ್ಮಾದನ್ನರಸ ಮಯಾತ್ ಅನ್ಯೋಽಂತರ ಆತ್ಮಾಪ್ರಾಣಮಯಃ (ತೈ.ಉ.೨.೨)

ಮನಸ್ಸು ಆತ್ಮಾ ಮನ ಆತ್ಮಾವಾದಿಯಮತ

(ಪಂ.ದ.ಶ್ಲೋ ೬-೬-೭) ಮನ ಆತ್ಮೇತಿ ಮನ್ಯಂತ ಉಪಾಸನ ಪರಾಜನಾಃ ಪ್ರಾಣಸ್ಯಾಭೋಕ್ತ್ರತಾ ಸ್ವಷ್ಟಾಭೋಕ್ತೃತ್ವಂ ಮನಸತ್ತತಃ

೬೭) ಪ್ರಾಣಕ್ಕೆ ಭೋಕ್ತೃತ್ವಂ ವಿಲ್ಲದಿರುವದರಿಂದಲೂ ಮನಸ್ಸಿಗೆ ಭೋಕ್ತೃತ್ವ ವಿರುವದರಿಂದಲೂ ಉಪಾಸನಾ ಪರರಾದ ಜನರು ಮನಸ್ಸು ಆತ್ಮನೆಂದು ಭಾವಿಸುತ್ತಾರೆ ಮನಸ್ಸು ಆತ್ಮನೆಂದು ಯುಕ್ತಿ

ಮನಸ್ಸು ಆತ್ಮವಾದಿಯ ಯುಕ್ತಿ

೬೮) (ಪಂ.ದ.ಶ್ಲೋಕ ೬೮) ಮನಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೊ। ಶೃತೋಮನೋಮಯ ಕೋಶಸ್ತೇನಾತ್ಮೇತಿರಿತಂ ಮನಃ ||೬೮||

ಅರ್ಥ : ಮನಸ್ಸೇ ಮನುಷ್ಯನ ಬಂಧ ಮೋಕ್ಷಗಳಿಗೆ ಕಾರಣವಾಗಿರುವದು.

ಶೃತಿಗಳು ಮನೋಮಯ ಕೋಶವನ್ನು ವಿವರಿಸಿವೆ.

ತಸ್ಮಾದ್ವಾವತಸ್ಮಾತ್ ಪ್ರಾಣಮಯಾದನೋಂತರ ಆತ್ಮಾಮನೋಮಯಃ (ತೈ.ಉ.೨)

ಅರ್ಥ: ಪ್ರಾಣಮಯನಾದ ಆತ್ಮನಿಗಿಂತ ಬೇರೆಯವನೂ ಅಂತರನೂ ಮನೋಮಯನೂ ಆದ ಆತ್ಮನಿರುವನು.

ಬುದ್ಧಿ ಆತ್ಮಾ (ಬೌದ್ಧ ಮತ)

(ಪಂ ದ.ಪ್ರ ಶ್ಲೋಕ ೬೯)ವಿಜ್ಞಾನ ಮಾತ್ಮೇತಿ ಪರ ಆಹುಃ ಕ್ಷಣಿಕವಾದಿನಃ। ಯತೋ ವಿಜ್ಞಾನ ಮೂಲತ್ವಂ ಮನೋಗ ಮ್ಯತೇಸ್ಪುಟಮ್।

೬೯) ಬುದ್ಧಿಯು ಮನಸ್ಸಿಗೆ ಹೇತುವೆಂಬುದು ಸ್ಪುಟವಾಗಿರುವದರಿಂದ ಬುದ್ದಿಯೇ ಆತ್ಮನೆಂದು ಕ್ಷಣಿಕವಾದಿಗಳು ಹೇಳುತ್ತಾರೆ.

(ಪಂ.ದ.ಪ್ರ.ಶ್ಲೋ. ೭೦) ಅಹಂ ವೃತ್ತಿರಿದಂ ವೃತ್ತಿರಿತ್ಯಂತಃ ರಣಂ ದ್ವಿಧಾ। ವಿಜ್ಞಾನಂ ಸ್ಯಾದಹಂ ವೃತ್ತಿರಿ ವೃತ್ತಿರ್ಮನೋಭವೇ।

ನಾನು ಎಂಬ ವೃತ್ತಿರೂಪವಾಗಿಯೂ ಇದು ಎಂಬ ವೃತ್ತಿರೂಪವಾಗಿಯೂ ಅಂತಃಕರಣ ಎರಡು ಬಗೆಯಾಗಿರುಲದು, ನಾನು ಎಂಬ ವೃತ್ತಿಯು ವಿಜ್ಞಾನವಾಗಿರುತ್ತದೆ. ಎಂಬ ವೃತ್ತಿಯು ಮನಸ್ಸಾಗಿರುತ್ತದೆ(ಆದುದರಿಂದ ಇದು ಎಂಬ ವೃತ್ತಿರೂಪವಾದ ಮನಸ್ಸಿಗೆ ನಾನು ಎಂಬ ವೃತ್ತಿರೂಪವಾದ ವಿಜ್ಞಾನವೂ ಕಾರಣವಿರುವದು.

೧) (ಪಂ.ಪ್ರ-೬ ಶ್ಲೋ ೭೨) ಕ್ಷಣೇ ಕ್ಷಣೇ ಜನ್ಮನಾಶಾವಹಂವೃತ್ತೇ ಮತಾ ಯತಃ।
ವಿಜ್ಞಾನಂ ಕ್ಷಣಿಕಂ ತೇನ ಸ್ವಪ್ರಕಾಶಂ ಸ್ವತೋ ಮಿತೇಃ ॥೭೨॥

೭೨) ನಾನು ಎಂಬ ವೃತ್ತಿಯು ಒಂದು ಕ್ಷಣದಲ್ಲಿ ಹುಟ್ಟಿ ಮತ್ತೊಂದು ಕ್ಷಣದಲ್ಲಿ ನಾಶವಾಗುವುದರಿಂದ ವಿಜ್ಞಾನವು ಮತ್ತು ತನ್ನಿಂದಲೇ ಅರಿಯಲ್ಪಡುವುದರಿಂದ ಅದು ಸ್ವಪ್ರಕಾಶವಾಗಿದೆ.

(ವಿಜ್ಞಾನವು ಆತ್ಮನೆಂಬ ವಿಷಯದಲ್ಲಿ ಶ್ರುತಿಪ್ರಮಾಣವನ್ನು ಹೇಳುತ್ತಾರೆ)

(ಪಂ.ಪ್ರ.೬-೭೩) ವಿಜ್ಞಾನಮಯಕೋಶೋಽಯಂ ಜೀವ ಇತ್ಯಾಗಮಾ ಜಗುಃ।

ಸರ್ವಸಂಸಾರ ಏತಸ್ಯ ಜನ್ಮ ನಾಶಸುಖಾದಿಕಃ ೭೩.

೭೩) ಈ ವಿಜ್ಞಾನಮಯ ಕೋಶವೇ ಜೀವನೆಂದು। ವೇದಗಳು ಹೇಳುತ್ತವೆ. ಜನ್ಮಮರಣ, ಸುಖ ಇವೇ ಮೊದಲಾದ ಸಂಸಾರವೆಲ್ಲವೂ ಜೀವನಿಗೆ ಉಂಟಾಗಿದೆ.

ತಸ್ಮಾದ್ವಾ( ಏತಸ್ಮಾನ್ಮನೋಮಯಾದನ್ನೇ ನಂತರ ಆತ್ಮಾ ವಿಜ್ಞಾನಮಯ)

(ತೈ.ಉ. ೨-೨) ವಿಜ್ಞಾನಂ ಯಜ್ಞಂ ತನುತೇ (ತೈ.ಉ.೨.೫) ಶೂನ್ಯವಾದಿಯ ಮತ

(ಪಂ.ದ.ಪ್ರ.೬.೭೪) ವಿಜ್ಞಾನಂ ಕ್ಷಣಿಕಂ ನಾತ್ಮಾ ವಿದ್ಯುದಭನಿಮೇಷವತ್।

ಅನ್ಯಸ್ಯಾನುಪಲಬ್ಬತ್ವಾಚ್ಛೂನ್ಯಂ ಮಾಧ್ಯಮಿಕಾ ಜಗುಃ ॥೭೪॥

೭೪) ಮಿಂಚು, ಮೋಡ, ಕಣ್ಣು ಮಿಟುಕು ಇವುಗಳ ಹಾಗೆ ಕ್ಷಣಿಕವಾದ ವಿಜ್ಞಾನವು ಆತ್ಮನಲ್ಲ ಬೇರೊಂದು ವಸ್ತು ಇಲ್ಲದಿರುವದರಿಂದ ಶೂನ್ಯವೇ ಆತ್ಮನೆಂದು ಮಾಧ್ಯಮಿಕರು ಹೇಳುತ್ತಾರೆ.

ಶೂನ್ಯವಾದಿಗಳು ಶ್ರುತಿಪ್ರಮಾಣವನ್ನು ಹೇಳುತ್ತಾರೆ.

ಅಸದೇವೇ ದಮಿತ್ಯಾದಾ ವಿದಮೇದ ಶ್ರುತಂ ತತಃ।

ಜ್ಞಾನಜ್ಞೇಯಾತ್ಮಕಂ ಸರ್ವ ಜಗದ್ಭ್ರಾಂತಿಪ್ರಕಲ್ಪಿತಮ್।

೭೫) ಇದಲ್ಲವೂ ಅಸತ್ತಾಗಿಯೇ (ಇತ್ತು) ಇದೇ ಮೋದಲಾಗಿ ಶ್ರುತಿಯಲ್ಲಿ ಶೂನ್ಯತ್ವವೇ ಶ್ರುತವಾಗಿದೆ ಆದುದರಿಂದ ಜ್ಞಾನಜ್ಞೇಯಾತ್ಮಕವಾದ ಸಮಸ್ತ ಜಗತ್ತೂ ಭ್ರಾಂತಿಯಿಂದ ಕಲ್ಪಿಸಲ್ಪಟ್ಟಿದೆ.

(ಸೃಷ್ಟಿಗೆ, ಮೋದಲು ಆ ಜಗತ್ತು ಏಕ ಅದ್ವಿತಿಯವೂ ಆದ ಅಸತ್ತೆ ಆಗಿತ್ತು, ಅಸದೇವೇದಮಗ್ರ ಅಸೀದೇಕಮೇವಾದ್ವಿತಿಮ್ (ಛಾಂ.ಉ.೬.೨.೧)

ಈ ಸಿದ್ಧಾಂತಿಗಳು ಈ ಶೂನ್ಯಮತವನ್ನು ದೂಷಿಸುತ್ತಾರೆ.

(ಪಂ.೬.೭.೬) ನಿರದಿಷ್ಠಾನ ವಿಭ್ರಾಂತೇರ ಭಾವಾದಾತ್ಮನೊಸ್ತಿತಾ।

ಶೂನ್ಯಸ್ಯಾದ ಸಸಾಕ್ಷಿತ್ವಾದನ್ಯಥಾ ನೋಕ್ತಿರಸ್ಯತೇ ॥೭೬॥

ಆಧಾರವಿಲ್ಲದ ಭ್ರಾಂತಿಯು ಸಂಭವಿಸುವಿಲ್ಲವಾದುದರಿಂದ ಆತ್ಮನ ಅಸ್ತಿತ್ವವನ್ನು ಒಪ್ಪಿಕೊಳ್ಳಬೇಕಾಗುವುದು.

೧) ಶೂನ್ಯಕ್ಕೂಕೂಡ ಸಾಕ್ಷಿಯು ಅವಶ್ಯವಾಗಿರುವದರಿಂದ (ಆತ್ಮನ ಅಸ್ತಿತ್ವವು) ಯುಕ್ತವಾಗಿರುವದು ಹಾಗೆ ಆತ್ಮನನ್ನು ಅಂಗೀಕರಿಸಿದ ಪಕ್ಷದಲ್ಲಿ ನಿನ್ನಮತದಲ್ಲಿ ಶೂನ್ಯದ ಮಾತೇ ಸಿದ್ಧಿಸುವುದಿಲ್ಲ.

೧) ಭ್ರಾಂತಿಗೆ ಆಧಾರವಾದ ಒಂದು ವಸ್ತುವಿಲ್ಲದಿದ್ದರೆ ಭ್ರಾಂತಿಯೇ ಸಂಭವಿಸುವದಿಲ್ಲ ಉಧಾಹರಣೆಗೆ ಹಗ್ಗವೆಂಬ ಆಧಾರವಿಲ್ಲದಿದ್ದರೆ ಹಾವೆಂಬ ಭ್ರಾಂತಿಯುಂಟಾಗಲಾರದು ಆದುದರಿಂದ ಮಾಧ್ಯಮಿಕನ ಪಕ್ಷದಲ್ಲಿ ಶೂನ್ಯತ್ವವು ಸಂಭವಿಸುದಿಲ್ಲ. ಹಾಗಾದಲ್ಲಿ ಇವರು ಆತ್ಮನನ್ನು ಒಪ್ಪಿಕೊಳ್ಳಬೇಕಾಗುವುದು.

೨) ಶೂನ್ಯದ ಅನುಭವುಂಟಾದರೆ ಅದಕ್ಕಿಂತ ಬೇರೆಯಾದ ಮತ್ತು ಅದಕ್ಕೆ ಸಾಕ್ಷಿಯದ ಆತ್ಮನನ್ನು ಒಪ್ಪಿಕೊಳ್ಳಬೇಕಾಗುವುದು.

ಈಗ ಈ ಆತ್ಮನೂ ಯಾರೆಂಬುದನ್ನು ಹೇಳುತ್ತಾರೆ

ಅನ್ಯೋಽವಿಜ್ಞಾನಮಯತ ಆನಂದಮಯ ಅಂತರಃ।

ಅಸ್ತೀತ್ಯೇಮೋಪಲಬ್ಧವ್ಯಮ್ ವೈದಿಕದರ್ಶನಮ್ ೭೭.

೩) ವಿಜ್ಞಾನಮಯ ಕೋಶಕ್ಕಿಂತಲೂ ಬೇರೆಯಾದ ಮತ್ತು ಒಳಗಿರುವ ಆನಂದಮಯ ಕೋಶವು ಇರುವದು ಎಂದು ಶ್ರುತಿಯಿಂದ ತಿಳಿಯತಕ್ಕದ್ದು ಎಂಬುವದು ವೈದಿಕ ದರ್ಶನ (ತಸ್ಮಾದ) ಏತಸ್ಮಾತ ವಿಜ್ಞಾನಮ್‌ಯಾದನ್ಯೋಽಂತರ ಆತ್ಮಾ ಆನಂದಮಯ। (ತೈ. ಉ. ೨೫) ಇದ್ದಾನೆ ಎಂದು ತಿಳಿಯತಕ್ಕದ್ದು ಅಸ್ತೈೇ ಮೋಪಲಬ್ದವ್ಯಃ) (ಕ.ಉ.೨.೧೨) ಹೀಗೆ ಆತ್ಮನ ಸ್ವರೂಪದ ವಿಷಯದಲ್ಲಿ ಮತಭೇದಗಳು ತೋರಿಸಿ ಈಗ ಆತ್ಮನ ಪರಿಣಾಮ ವಿಷಯದಲ್ಲಿರುವ ಮತಬೇದಗಳು ತೋರಿಸಿ ಈಗ ಆತ್ಮನ ಪರಿಮಾಣ ವಿಷಯದಲ್ಲಿ ಮತಭೇದಗಳನ್ನು ಹೇಳುತ್ತಾರೆ.

ರೋಮ್ಣ ಃ ಸಹಸ್ರಭಾಗೇನ ತುಲ್ಯಾಸು ಪ್ರಚರತ್ನಮ್ (೭೯)

೭೯) ಒಂದು ಕೂದಲಿನ ಸಾವಿರ ಪಾಲಿನಲ್ಲಿ ಒಂದು ಪಾಲಿಗೆ ಸಮವಾದ ಸೂಕ್ಷ್ಮ ನಾಡಿಗಳಲ್ಲಿ ಆತ್ಮನು ಸಂಚರಿಸುವದರಿಂದ ಅವನು ಅಣು ಪರಿಮಾಣವುಳ್ಳವನು ಎಂದು ಅಂತರಾಳರೆಂಬ ವಾದಿಗಳು ಹೇಳುತ್ತಾರೆ.

ಆತ್ಮನು ಅಣುವೆಂಬದಕ್ಕೆ ಈ ವಾದಿಗಳು ಪ್ರಮಾಣವನ್ನು ಹೇಳುತ್ತಾರೆ.

ಅಣೋರಣಿಯಾನೇಕ್ಸೋಣುಃ ಸೂಕ್ಷಾತ್ ಸೂಕ್ಷ್ಮತರಂ ತ್ವಿತಿ ಅಣುತ್ವಮಾಹುಃ ಶ್ರುತಯಃ ಶತಶೋಥ ಸಹಸ್ರಶಃ ೮೦

೮೦) ಈ ಆತ್ಮನು ಅಣುಪರಿಣಾಮವುಳ್ಳನು ಅಣುವಿಗಿಂತ ಅಣುತರನು ಸೂಕ್ಷತರನು ಎಂದು ನೂರಾರು ಅಥವಾ ಸಾವಿರಾರು ಶ್ರುತಿಗಳು ಆತ್ಮನ ಅಣುತ್ವವನ್ನು ಹೇಳುತ್ತೆವೆ. (ಅಣುವಿಗಿಂತ ಅಣುತರನು ಅಣೋ ರಣೀಯನ್ (ಅಣೋರಣೀಯನ್) (ಸ್ವೆ.ಉ.೨೦) ಈ ಅಣುವಾ ಆತ್ಮನನ್ನು ಚೇತಸ್ಸಿನಿಂದ ತಿಳಿಯಬೇಕು ವಿಶೇಣುರಾತ್ಮಾ ಚೇತಸಾ ವೇದಿತವ್ಯ (ಮುಂ.ಉ.೨.೧.೬)

ಈ ವಿಷಯದಲ್ಲಿ ಇನ್ನೊಂದು ಶ್ರುತಿಯನ್ನು ಉದಾರಹರಿಸುತ್ತಾರೆ.

ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯಚ ।

ಭಾಗೋ ಜೀವಃಸ ವಿಜ್ಞೇಯಿತಿ ಬೌಹಾಪರಾ ಶ್ರತಿಃ ॥೮೧॥

೮೧) ಕೂದಲೆಳೆಯ ತುದಿಯನ್ನು ನೂರಾಗಿ ಬಾಗಿಸಿ ಅದರ ಒಂದು ಭಾಗವನ್ನು ಪುನಃ ನೂರಾಗಿ ಭಾಗಿಸಿದರೆ ಎಷ್ಟು ಅಣುಪರಿಮಾಣವುಂಟಾಗುವದೊ ಅಷ್ಟು ಪರಿಮಾಣವುಳ್ಳವನು.

ಈಗ ಮಧ್ಯಮ ಪರಿಮಾಣವಾದಿಯ ಮತವನ್ನು ಹೇಳುತ್ತಾರೆ

ದಿಗಂಬರಾ ಮದ್ಯಮತ್ವ ಮಾಹರಾ ಪಾದಮಸ್ತಕಮ್।

ಚೈತನ್ಯವ್ಯಾಪ್ತಿ ಸಂದೃಷ್ಟೇರಾನ ಖಾಗ್ರ ಶ್ರುತೇರಪಿ ॥೮೨॥

೮೨) ಪಾದದಿಂದ ಪ್ರಾರಂಭಿಸಿ ತಲೆಯವರೆಗೆ ಚೈತನ್ಯದ ವ್ಯಾಪ್ತಿಯು ಕಂಡು ಬರುವುದರಿಂದಲೂ ಆನ ಖಾಗ್ರೇಭ್ಯಃ ಎಂಬ ಶುತಿಯಿರುವುದರಿಂದಲೂ ಮಧ್ಯಮ ಪರಿಮಾಣವುಳ್ಳವನೆಂದು ದಿಗಂಬರರು ಹೇಳುತ್ತಾರೆ (ಈ ಈತ್ಮನು ಶರೀರಗಳಲ್ಲಿ ನಖಾಗ್ರಗಳವರೆಗೂ ಪ್ರವೇಶಿಸುತ್ತಾನೆ ಸ.ಏಷ ಇಹ ಪ್ರವಿಷ್ಟ ಒಂದು ಆ ನಖಾಗ್ರೇಭ್ಯಃ (ಬ್ರ.ಉ.೪.೭)

ಈ ದಿಗಂಬರರು ಆತ್ಮನ ನಾಡೀ ಪ್ರಚಾರಕ್ಕೆ ಒಂದು ದೃಷ್ಟಾಂತವನ್ನು ಕೊಡುತ್ತಾರೆ.

ಸೂಕ್ಷ್ಮ ನಾಡೀ ಪ್ರಚಾರಸ್ತು ಸೂಕ್ಷ್ಮೇರವಯ ವೈರ್ಬವೇತ್।

ಸ್ಥೂಲದೇಹಸ್ಯ ಹಸ್ತಾಭ್ಯಾಂ ಕಂಚು ಕಪ್ರತಿಮೋಕವತ್॥೮೩॥

೮೩) ಅಂಗಿಗೆ ಕೈಗಳಿಂದ ಸ್ಥೂಲದೇಹದ ಪ್ರವೇಶವಾಗುವಂತೆ ಆತ್ಮನ ಸೂಕ್ಷ್ಮ ವಲಯಗಳಿಂದ ಸೂಕ್ಷ್ಮ ನಾಡಿಗಳಲ್ಲಿ ಆತ್ಮನ ಸಂಚಾರವು ಉಂಟಾಗುತ್ತದೆ.

ಆತ್ಮನಿಗೆನಿಯತವಾದ ಮಧ್ಯಮ ಪರಿಮಾಣವಿದ್ದರೆ ಅವನಿಗೆ ದೊಡ್ಡ ಚಿಕ್ಕ ಶರೀರಗಳಲ್ಲಿ ಪ್ರವೇಶವು ಹೇಗೆ ಉಂಟಾಗುವದು? ಎಂಬುದಕ್ಕೆ ಪರಿಹಾರವನ್ನು ಹೇಳುತ್ತಾರೆ.

ನ್ಯೂನಾಧಿಕ ಶರೀರೇಷು ಪ್ರವೇಶೋಪಿ ಗಮಾಗಮ್ಯೆಃ।

ಆತ್ಮಾಂಶಾನಾಂ ಭವೇತ್ತೇನ ಮದ್ಯಮತ್ವಂ ವಿನಿಶ್ಚಿತಮ್॥೮೪॥

೮೪) ಆತ್ಮನ ಅವಯವಗಳ ಸಂಕೋಚ-ವಿಕಾಸಗಳಿಂದ ಚಿಕ್ಕದೂ ದೊಡ್ಡದೂ ಆದ ಶರೀರಗಳಲ್ಲಿ ಪ್ರವೇಶವು ಸಾಧ್ಯವಾಗುತ್ತದೆ ಆದುದರಿಂದ ಮಧ್ಯಮದ ಪರಿಮಾಣತ್ವವು (ಎಂದರೆ ಶರೀರ ಪರಿಮಾಣತ್ವವು) ನಿರ್ಧರಿಸ್ಪಟ್ಟಿದೆ.

ಈಗ ದಿಗಂಬರ ಮತವನ್ನು ಸಿದ್ಧಾಂತಿಗಳು ದೂಷಿಸುತ್ತಾರೆ.

ಸಾಂಶಸ್ಯ ಘಟವನ್ನಾಶೋ ಭವತ್ಯೇವ ತಥಾ ಸತಿ।

ಕೃತನಾಶಾ ಕೃತ ಭ್ಯಾಗಮಯೊಃ ಕೋ ವಾರಕೋ ಭವೇತ್ ॥೮೫॥

ಅವಯವವುಳ್ಳ ಮಡಿಕೆಗೆ ಹೇಗೊ ಹಾಗೆ ಅವಯುವಯುಕ್ತನಾದ ಆತ್ಮನಿಗೆ

. ನಾಶವುಂಟಾಗುತ್ತದೆ ಹೀಗಿರುವಾಗ ಕೃತವಿಪ್ರಣಾಶದೋಷವನ್ನು ಅಕೃತಭ್ಯಾಗಮ ದೋಷವನ್ನು ನಿವಾರಿಸಲು ಯಾರಿಗೆ ಸಾಧ್ಯವಾಗುತ್ತದೆ?

೧) ಶರೀರದೊಂದಿಗೆ ಆತ್ಮನ ನಾಶವಾಗುವದರಿಂದ ಮಾಡಿದ ಕರ್ಮಕ್ಕೆ ಫಲವಿಲ್ಲದಿರುವುದು

೨) ಆತ್ಮನಿಗೆ ಪೂರ್ವ ಜನ್ಮವಿಲ್ಲದ್ದರಿಂದ ಪೂರ್ವ ಕರ್ಮ ಸಂಭಂಧವಿಲ್ಲದೆ ಸುಖದುಃಖಗಳ ಅನುಭವ

ತಸ್ಮಾದಾತ್ಮಾ ಮಹಾನೇವ ನೈವಾಣುರ್ನಾಪಿ ಮಧ್ಯಮಃ।
ಆಕಾಶವತ್ಸರ್ವಗತೋ ನಿರಂಶಃ ಶ್ರುತಿಸಂಮತಃ ॥೮೬॥

೮೬) ಆದುದರಿಂದ ಆತ್ಮನು ಅಣುಪರಿಮಾಣವುಳ್ಳವನೂ ಅಲ್ಲ. ಮಧ್ಯಮ ಪರಿಮಾಣವುಳ್ಳವನೂ ಅಲ್ಲ. ಮಹತ್ಪರಿಮಾಣವುಳ್ಳವನೇ (ಅವನು) ಆಕಾಶದಂತೆ ಸರ್ವವ್ಯಾಪಿಯು ಮತ್ತು ಅವಯುವರಹಿತನು ಈ ಮತವು ಶುತಿಗಳಿಗೆ ಸಮ್ಮತವಾಗಿದೆ.

(೧. ನಿಷ್ಕಲಂ ನಿಷ್ಕ್ರಿಯಂ (ಶ್ವೇ.ಉ. ೬.೧೯)

**ಆತ್ಮಾ ಅನಂತ**

೧) (ವಿ.ಚಂ.೨೨೧) ದೇಶಕಾಲವಸ್ತುಕೃತ ಪರಚ್ಛೇದಕಾ ನಿಷೇಧಬಯಾ ಬಾಕಿ ರಹಸ್ಯೋ ಅನಂತ ಅರ್ಥಸೆ ಸಿದ್ಧಹೈ।

೨) (ವಿ.ಸಾ.ಟಿ.೧೮೯)ದೇಶ, ಕಾಲ ಔರ ವಸ್ತುತೆ, ಜಾಕಾ ಪರಿಚ್ಛೆನ್ನಹೋವೆ ನಹಿ ಐಸಾ ಜೋ ಸರ್ವದೇಶ, ಸರ್ವಕಾಲ ಔರ ಸರ್ವವಸ್ತು ವಿಷೆ ವ್ಯಾಪಕ ಸೋ ಅನಂತ ಕಹಿಯೆ ಹೈ।

೩) (ವಿ.ಚಂ.ಕಲಾ ೭ ಪೇಜ ೧೭೬) ಆತ್ಮಾ ವ್ಯಾಪಕ ಹೈತಾತೆ ಆತ್ಮಾ ಕಾದೇಶತೆ ಅಂತ ನಹಿ, ಜಾತೆ ಆತ್ಮಾನಿ ತ್ಯಹೈತಾತೆ ಆತ್ಮಾಕಾ ಕಾಲತೆ ಅಂತ ನಹಿ (೩) ಜಾತೆ ಆತ್ಮಾ ಅಧಿಷ್ಠಾನ ಹೋನೇತೆ ಸರ್ವಕಾಸ್ವರೂಪ ಹೈತಾತೆ ಆತ್ಮಾಕಾ ವಸ್ತುತೆ ಅಂತ ನಹಿ। ಔರ ಜಾತೆ ಆತ್ಮಾಕಾ ದೇಶ, ಕಾಲ ವಸ್ತುತೆ ಅಂತ ನಹಿ ಕಹಿಯೆ ಪರಿಚ್ಛೆದ ನಹಿತಾತೆ ಆತ್ಮಾ ಅನಂತ ಹೈ।

**ಆಕಾಶ**

೧) ರೂಪ ಸ್ಪರ್ಶ ರಹಿತತ್ವೇಸತಿ ಶಬ್ದಗುಣಕಂ ಆಕಾಶಃ

೨) (ಪ.೧.೯.೩) ಇರಲೆಡೆಯಾಗಿ ಸುಷಿರ ರೂಪಾಗಿ ಸುಸ್ಥಿರ ಸೂಕ್ಷ್ಮವಾಗಿ ಭರತವಾಗಿ ವರ ಶಬ್ದ ಗುಣಯುತಮಾಗಿರಲದು ತಾನೆ, ನಿರುತದಿಂದರಿವುದಂಬರವೆಂದು.೩.

೩) ಅವಕಾಶ ಲಕ್ಷಣಂ ಆಕಾಶ

**ಆಕಾಶದ ಗುಣಗಳು**

(ಪ್ರ.ಭೋ.೨-೧-೭) ಕಾಮಕೋಪ ಲೋಭ ಮೋಹ ಭಯವೆಂಬ ನಾಮಾದಿ ಪರಿವಿಡಿದೊಪ್ಪುವ ವ್ಯೊಮದ ಮೂರ್ತದಂಶಿಕ ವೈದು ಗುಣ। ಮಿವು ಕಾಮಿನಿ ಚಿತ್ತಿಗಿಲ್ಲೆಂದು॥

ಆಕಾಶ ಬೇಧಗಳು

೪) (ವಿ.ಸಾ.ಅಂಕ-೧೫೯) ಘಟಾಕಾಶ, ಜಲಾಕಾಶ, ಮೇಘಾಕಾಶ, ಮಹಾಕಾಶ

ಘಟಾಕಾಶ

೫) (ವಿ.ಸಾ.ಅಂಕ.೧೬೦) ಜಲದಿಂದ ತುಂಬಿದ ಘಟದಲ್ಲಿ ಎಷ್ಟು ಆಕಾಶ ಅವಕಾಶ ಕೊಟ್ಟಿರುವದೋ ಅಷ್ಟು ಆಕಾಶಕ್ಕೆ ಪಂಡಿತರು ಘಟಾಕಾಶವೆಂದು ಹೇಳುವರು.

ಈ ಲಕ್ಷಣಕ್ಕೆ ಶಂಕಾ ಸಮಾಧಾನ (ವಿ.ಸಾ.ಟಿ.೧೨೪) ರಲ್ಲಿನೋಡಬಹುದು.

ಜಲಾಕಾಶ

೬) (ವಿ.ಸಾ.ಅಂಕ ೧೬೧) ಜಲದಿಂದ ತುಂಬಿದ ಯಾವ ಘಟವಿರುವದು ಇದರಲ್ಲಿ ನಕ್ಷತ್ರಾದಿ ಸಹಿತ ಆಕಾಶ ಪ್ರತಿಬಿಂಬ ವಿರುವದು ಆ ಆಕಾಶದ ಪ್ರತಿಬಿಂಬವು ಮತ್ತು ಘಟಕಾಶ ಎರಡೂ ಕೂಡಿಕೊಂಡಿದ್ದು ಜಲಾಕಾಶವೆಂದು ಹೇಳಿರುವದು. (ವಿ.ಸಾ.ಟಿ.೧೭೫) ಜಲದ ಹೊರತಾಗಿ ಪ್ರತಿಬಿಂಬ ಬೀಳುವುದಿಲ್ಲ ಆದ್ದರಿಂದ ಇಲ್ಲಿ ಆಕಾಶದ ಪ್ರತಿಬಿಂಬ ಹೇಳುವಲ್ಲಿ ಘಟದಲ್ಲಿ ಸ್ಥಿತವಾಗಿರುವ ಯಾವ ಜಲಸಹಿತ ಆಕಾಶದ ಪ್ರತಿಬಿಂಬವೆಂದು ಗ್ರಹಿಸಬೇಕು.

೭) ಈ ಲಕ್ಷಣಕ್ಕೆ ಶಂಕಾ ಸಮಾಧಾನ (ವಿ.ಸಾ.ಟಿ.೧೭ರಲ್ಲಿ) ನೋಡಬಹುದು.

ಮೇಘಾಕಾಶ

(ವಿ.ಸಾ.ಅಂಕ.೧೬೨) ಮೇಘ ಯಾವ ಬಾದಲ ಇದಕ್ಕೂ ಯಾವ ಆಕಾಶ ಅವಕಾಶ ಕೊಟ್ಟಿರುವದು ಮತ್ತು ಮೇಘದ ಜಲದಲ್ಲಿ ಯಾವ ಆಕಾಶದ ಪ್ರತಿಬಿಂಬವಿರುವದು ಆ ಎರಡಕ್ಕೂ ಮೇಘಾಕಾಶವೆಂದು ಹೇಳಿರುವದು.

ಈ ಲಕ್ಷಣಕ್ಕೆ ಶಂಕಾ ಸಮಾಧಾನ ಇದೇ ೧೬೨ ಅಂಕಿನಲ್ಲಿ ನೋಡಬಹುದು.

ಮಹಾಕಾಶ

(ವಿ.ಸಾ.ಅಂಕ ೧೬೩) ಬ್ರಹ್ಮಾಂಡದ ಹೊರಗೆ ಮತ್ತು ಒಳಗೆ ಎಲ್ಲಕಡೆಗೂ ಏಕರಸ ವ್ಯಾಪಕ ಯಾವ ಆಕಾಶದ ಸ್ವರೂಪವೇ ಇರುವದು ಅದಕ್ಕೆ ಅದ್ಭುತ ಬುದ್ಧಿಯುಳ್ಳಪಂಡಿತರು ಮಹಾಕಾಶವೆಂದು ಹೇಳಿರುವರು.

ಆವರಣ

೧) ಅಸ್ತಿನ ಪ್ರಕಾಶತೆ ವ್ಯವಹಾರ ಹೇತುಃ ಆವರಣಂ

೨) (ವಿ.ಸಾ.ಅಂಕ ೧೭೯) ಬ್ರಹ್ಮಹೈ ನಹಿ ಔರ ಬಾನ ನಹಿ ಹೋವೆ ಹೈ ಇಸ ವ್ಯವಹಾರಕಾ ಹೇತು ಆವರಣ ಹೈ।

೩) (ವಿ.ಚಂ.ಪೇಜ ೪೨೩) ನಹಿ ಹೈ ನಹಿ ಭಾಸ ತಾ ಹೈ ಇಸ ವ್ಯವಹಾರಕಾ ಹೇತು ಅಜ್ಞಾನ ಕಾ ಕಾರ್ಯ ಆವರಣ ಹೈ.

೪) (ವಿ.ಚಂ.೧೩೪) ಒಂದಾನೊಂದು ವೇಳೆ ಚಿದಾತ್ಮ ಪ್ರಸಂಗ ಬರಲಾಗಿ

ಪ್ರತ್ಯಗಾತ್ಮನಿಲ್ಲೆಂಬ ಹಾಗೂ ಪ್ರತ್ಯಗಾತ್ಮ ತೋರನೆಂಬ ಉಭಯವಿಧ ಮೋಸವೇ ಅಜ್ಞಾನ ಕಾರ್ಯಮಾದ ಆವರಣವೆನಿಸುವದು.

೫) (ಕೈವಲ್ಯ ೫-೨೦-೨) ವೇದ ವಿಚಾರದ ನೊಲ್ಲದುಳಿದು ಶುಷ್ಕವಾದ ದಿಂದೆ ಸಲೆ ಸಾಕ್ಷಿ ಕೂಟಸ್ಥ ಬೋಧ ವಿಲ್ಲವದು ತೋರದೆಂಬ ಮೋಸದಾದಿ ಯಾದು - ಭಯವೆನಿಸುವಾವರಣ।

**ಆವರಣ ಬೇಧ**

(ವಿ.ಸಾ.ಅಂಕ.೧೭೯) ದೋ ಪ್ರಕಾರಕೆ ಅಜ್ಞಾನಕಿ ಶಕ್ತಿಹೈ ಏಕತೊ, ೧. ಅಸತ್ವಾಪದಕ ಹೈ ಔರ ೨. ಅಭಾನಾಪಾದಕ ಹೈ ತಿನ ದೋನೊಕಾ ಆವರಣ ಕಹೆ ಹೈ।

**ಅಸತ್ವಾಪಾದಕ ಆವರಣ**

೧) (ವಿ.ಸಾ.ಅಂಕ.೧೭೯) ವಸ್ತು ನಹಿ ಹೈ ಐಸಿ ಪ್ರತೀತಿ ಕರನೆವಾಲೆ ಜೊ ಶಕ್ತಿಸೋ ಅಸತ್ವಾಪಾದಕ ಕಹಿಯೆ ಹೈ.

೨) (ವಿ.ಚಂ.ಟಿ.೧೪) ಬ್ರಹ್ಮ ನಹಿ ಹೈ ಇಸ ರೀತೀಸೆ ಬ್ರಹ್ಮಕೆ ಅಸತ್ವಕಾ ಅಪಾದಕ (ಸಂಪಾದಕ) ಆವರಣ ಅಸತ್ವಾದಕ ಆವರಣ ಹೈ।

**ಅಭಾವನಾ ಪಾದಕ ಆವರಣ**

೧) (ವಿ.ಸಾ.ಅಂಕ ೧೭೯) ವಸ್ತುಕಾಭಾನ ಹೋವೆ ಹೈ ಐಸಿ ಪ್ರತೀತಿ ಕರನೇವಾಲಿ ಜೋ ಅಜ್ಞಾನ ಶಕ್ತಿ ಸೋ ಅಭಾನಾಪಾದಕ ಕಹಿಯೆ ಹೈ.

೨) (ವಿ.ಚಂ.ಟಿ.೨೦) ಬ್ರಹ್ಮಭಾಸತಾ ನಹಿ ಇಸ ರೀತಿಸೆ ಅಭಾನ ಜೋ ಬ್ರಹ್ಮಕಿ ಅಪ್ರತೀತಿ ತಾಕಾ ಅಪಾದಕ ಕಹಿಯೆ ಸಂಪಾದನ ಕರನೆವಾಲಾ ಆವರಣ ಪಾದಕ ಅಭಾವ ಆವರಣ ಹೈ.

**ಆವರಣ ಕ್ರಿಯೆ**

ಅಸತ್ವಾಪಾದಕ : ಇದು ಸದ್ರೂಪವನ್ನು ತೋರಗೊಡದಂತೆ ಮಾಡಿದೆ

ಆಭಾನಾಪಾದಕ : ಇದು ಚಿದ್ರೂಪವನ್ನು ತೋರಗೊಡದಂತೆ ಮಾಡಿದೆ.

ಅನಾನಂದಾ ಪಾದ ಕಾವರಣವು ಆನಂದವನ್ನು ತೋರಗೊಡದಂತೆ ಮಾಡಿದೆ.

**ಆವರಣಕ್ಕೆ ಆಶ್ರಯ**

ಅಸತ್ವಾಪಾದಕ ಜೀವನಾಶ್ರಯದಲ್ಲಿದೆ

ಅಭಾನಾಪಾದಕ ಬ್ರಹ್ಮನಾಶ್ರಯದಲ್ಲಿದೆ

ಅಭಾನಾಪಾದಕ ಕೂಟಸ್ಥನಾಶ್ರಯದಲ್ಲಿದೆ

**ಅಪ್ತ ಪುರುಷ**

ಯತಾರ್ಥ ವಕ್ತಾ ಅಪ್ತ ಪುರುಷಃ

**ಆಪ್ತ ಪುರುಷರು**

೨) ಯಥಾರ್ಥವೇ ಪೇಳ್ವಪರಮೇಶ್ವರನು ಜಗತ್ತಿನ ಜೀವಕೊಟಿಗೆ ಆಪ್ತ ಪುರುಷನಾಗಿರುವದರಿಂದ ವೇದಗಳುಂ ತನ್ಮೂಲಕದಿಂ ಸ್ಮೃತಿ ಪುರಾಣೇತಿ ಹಾ।

ಸಂಗಗಳಂ ಲೋಕದೊಳು ಯಥಾರ್ಥ ದೃಷ್ಟಾರ್ಥವಾದಿಗಳಾದ ಸತ್ಪುರುಷರು ತತ್ತದಾಪ್ತರಾಗಿರುವರು.

ಆರೋಪ

೧) ಇದ್ದ ಮಣ್ಣಿನಲ್ಲಿ ಇಲ್ಲದ ಗಣಪತಿ ಕಲ್ಪಿಸುವದೇ ಆರೋಪ ಅದರಂತೆ ಇದ್ದ ಬ್ರಹ್ಮದಲ್ಲಿ ಇಲ್ಲದ ಜಗತ್ತು ಆರೋಪ

ಅಧ್ಯಾರೋಪ

೨) (ವಿ.ಚಂ.೬೭)ಉಳ್ಳರಜ್ಜು ಶುಕ್ತಿ-ಸ್ಥಾಣ್ವಾದಿಗಳಲ್ಲಿ ಕ್ರಮದಿಂದಿಲ್ಲದ ಅಹಿರಜತ ಚೋರಾದಿಗಳಂ ಕಲ್ಪಿಸುವಂತೆ ಸದ್ರೂಪಮಾದ ಬ್ರಹ್ಮದಲ್ಲಿಲ್ಲದ ಮಾಯಾ ಪ್ರಪಂಚದ ಕಲ್ಪನೆಯೇ ಅಧ್ಯಾರೋಪವೆನಿಸುವದು.

ಆರೋಪ (ವಿ.ಚಂ.ಟಿ.೩೫)

೩) ಬ್ರಹ್ಮರೂಪ ವಸ್ತುವಿನಲ್ಲಿ ಅಜ್ಞಾನತ, ತ್ಕಾರ್ಯರೂಪ ಅವಸ್ಥೆಯ ಕಥನ ಆರೋಪವಿರುವದು ಇದಕ್ಕೆ ಅಧ್ಯಾರೋಪವೆಂತಲೂ ಹೇಳುವರು.

೪) ಇದ್ದ ವಸ್ತುವಿನಲ್ಲಿ ಇಲ್ಲದ್ದನ್ನು ಕಲ್ಪಿಸುವು ಆರೋಪವೆನಿಸುವದು

ಆರೋಪಿತ (ವಿ.ಸಾ.ಟಿ. ೪೬೩)

೧) ತನ್ನ ತಾದಾತ್ಮ ಸಂಬಂಧದಿಂದ ಅಧಿಷ್ಠಾನದೊಡನೆ ಅಬಿನ್ನವುಂಟಾಗಿ ಯಾವದು ಪ್ರತೀತಿಯಾಗುವದು ಅದು ಆರೋಪಿತವೆಂದು ಹೇಳಿರುವರು.

೨) ಆರೋಪಿತವು ಅಧಿಷ್ಠಾನದಿಂದ ಬಿನ್ನಪ್ರತೀತಿಯಾಗುವದಿಲ್ಲ ಹೇಗೆಂದರೆ ರಜ್ಜುವಿನಲ್ಲಿ ಸರ್ಪ ಆರೋಪಿತ ವಿರುವದು ಆದುದರಿಂದ ಅದಕ್ಕೆ ರಜ್ಜುವಿನಿಂದ ಬಿನ್ನಪ್ರತೀತಿಯಾಗುವದಿಲ್ಲ ಕಿಂತು ರಜ್ಜುವಿನೊಡನೆ ಅಬಿನ್ನವಿರುವದು ಮತ್ತು ರಜ್ಜುವಿನ ಸ್ವರೂಪವನ್ನು ಮುಚ್ಚಿ ಸರ್ಪದ ಪ್ರತೀತಿ ಮಾಡುವದು ಅದರಂತೆ ಮಾಯಾ ಅವಿದ್ಯಾದಲ್ಲಿ ಯಾವ ಅಭಾಸವಿರುವದು ಅದಾದರೂ ಆರೋಪಿತವಿರುವದು, ಆದ್ದರಿಂದ ಅದಕ್ಕೆ ತನ್ನ ಅಧಿಷ್ಠಾನ ಕೂಟಸ್ಥ ಮತ್ತು ಬ್ರಹ್ಮದೊಡನೆ ಬಿನ್ನತಾದಿಂದ ಪ್ರತೀತಿ ಸಂಭವಿಸುವದಿಲ್ಲ ಕಿಂತು ಆ ಎರಡಕ್ಕೂ ತನ್ನ ಅಧಿಷ್ಠಾನ ಕೂಟಸ್ಥ ಮತ್ತು ಬ್ರಹ್ಮದೊಡನೆ ತದಾತ್ಮ್ಯ ಸಂಬಂಧರೂಪ ಏಕತೆಯು ಅವುಗಳ ಸ್ವರೂಪವನ್ನು ಮುಚ್ಚಿದಂತೆಯೇ ಪ್ರತೀತಿಯಾಗುವದು, ಆದರಿಂದ ಆರೋಪಿತವೆಂದು ಹೇಳಲಾಗಿದೆ.

ಆರೋಪ ಉತ್ಪತ್ತಿ (ವಿ.ಚಂ. ೨೧ ರಿಂದ ೨೬ರ ವರೆಗೆ) .

ಅನಾದಿ ಶುದ್ಧಬ್ರಹ್ಮದಲ್ಲಿ ಅನಾದಿಕಲ್ಪಿತ ಪ್ರಕೃತಿ ಇರುವದು, ಆ ಪ್ರಕೃತಿಗೆ ಬ್ರಹ್ಮದೊಡನೆ ಅನಾದಿಕಲ್ಪಿತ ತಾದಾತ್ಮ್ಯ ಸಂಬಂಧ ಇರುವದು. ಆ ಪ್ರಕೃತಿಯು ಮಾಯಾ ಅವಿದ್ಯಾತಮಃ ಪ್ರಧಾನ ಪ್ರಕೃತಿ, ರೂಪದಿಂದ ವಿಭಾಗವಾಯಿತು ಇದರಲ್ಲಿ ಯಾವ(೧) ಶುದ್ಧ ಸತ್ವಗುಣಯುಕ್ತ ಮಾಯಾ ಇರುವದು ಮತ್ತು (೨) ಮೇಲಿನ ಸತ್ವಯುಕ್ತ ಅವಿದ್ಯಾ ಇರುವದು ಮತ್ತು(೩) ಯಾವತ ಮೋಗುಣದ ಮುಖ್ಯತಾದಿಂದ ತಮಃ ಪ್ರಧಾನ ಪ್ರಕೃತಿ ಇರುವದು.

೧) ಮಾಯ್ಯಾದಲ್ಲಿಯಾವ ಬ್ರಹ್ಮದ ಪ್ರತಿಬಿಂಬ ಇರುವದು ಅದು ಅಧಿಷ್ಠಾನ (ಬ್ರಹ್ಮವು) ಅದು ಮಾಯಾಸಹಿತ ಜಗತ್ತ್ತರ್ತಾ ಈಶ್ವರನೆಂದು ಹೇಳಿರುವದು.

೨) ಅವಿದ್ಯಾದಲ್ಲಿಯಾವ ಬ್ರಹ್ಮದ ಪ್ರತಿಬಿಂಬ ಇರುವದು ಅದು ಅಧಿಷ್ಠಾನ, (ಕೂಟಸ್ಥ) ಅದು ಅವಿದ್ಯಾ ಸಹಿತ ಬೋಕ್ತಾ ಅಲ್ಪಜ್ಞ ಜೀವನೆಂದು ಹೇಳಿರುವದು(೧) ಈಶ್ವರ ಜೀವವಾದರೂ ಅನಾದಿ ಕಲ್ಪಿತವಿರುವರು ಅದರಲ್ಲಿ (೧) ಈಶ್ವರನ ಉಪಾದಿ ಮಾಯಾ ಒಂದು ಇರುವದು ಮತ್ತು ಅಪೇಕ್ಷಕ ವ್ಯಾಪಕ ವಿರುವದು, ಇದರಿಂದ ಈಶ್ವರನಾದರೂ ಒಬ್ಬನೇ ಮತ್ತುವ್ಯಾಪಕ ಇರುವನು ಮತ್ತು(೨) ಜೀವನ ಉಪಾದಿ ಅವಿದ್ಯಾನಾನಾ ಇರುವದು ಮತ್ತು ಪರಿಚಿನ್ನವಿರುವದು ಇದರಿಂದ ಜೀವನಾದರೂ ನಾನಾ ಅಂದರೆ ಅನೇಕ ಇರುವನು ಮತ್ತು ಪರಿಚಿನ್ನವಿರುವನು. ಆ ಜೀವ ಈಶ್ವರರಿಗೆ ಆನಾದಿಕಲ್ಪಿತ ಬೇಧವಿರುವದು, ಸೃಷ್ಟಿಯಿಂದ ಪೂರ್ವ ಜೀವನ ಉಪಾದಿ ಅವಿದ್ಯಾ ಜೀವನಿಗೆ ಕರ್ಮಸಹಿತವಾಗಿ ಮಾಯ್ಯಾದಲ್ಲಿ ಲಿನವುಂಟಾಗಿ ಇರುವದಾಯಿತು, ಅದು ಮಾಯಾ ಸುಷುಪ್ತಿಯಲ್ಲಿ ಅವಿದ್ಯಾದಂತೆ ಬ್ರಹ್ಮದಿಂದ ಬಿನ್ನಪ್ರತೀತ ನಾಮಸಿದ್ದವಾಗುವದಿಲ್ಲ ಆದ್ದರಿಂದ ಸೃಷ್ಟಿಗಿಂತ ಮೂದಲೇ ಸಜಾತಿಯ ವಿಜಾತಿಯ ಸ್ವಗತಬೇಧ ರಹಿತ ಒಂದೇ ಅದ್ವಿತೀಯ ಸಚ್ಚಿದಾನಂದ ರೂಪ ಬ್ರಹ್ಮ ಅಥವಾ ಆ ಬ್ರಹ್ಮವು ಸೃಷ್ಟಿಯ ಆರಂಭದಲ್ಲಿ ಜೀವನಿಗೆ ಪರಿಪಕ್ವವುಂಟಾಗಿ ಕರ್ಮರೂಪ ನಿಮಿತ್ಯದಿಂದ ನಾನು ಏಕರೂಪನು ಬಹುರೂಪವಾಗ ಬೇಕೆಂದು ಇಚ್ಛಾಆಯಿತು, ಆ ಇಚ್ಛಾದಿಂದ ಬ್ರಹ್ಮದ ಉಪಾದಿ ಮಾಯದಲ್ಲಿ ಕ್ಷೋಬವುಂಟಾಗಿ ಕ್ರಮದಿಂದ ಆಕಾಶವಾಯುತೇಜ-ಜಲ ಪ್ರಥ್ವಿ ಈ ಪಂಚ ಮಹಾಭೂತಗಳು ಉತ್ಪನ್ನವಾದವು ಅದರ ಪಂಚೀಕರಣ ಆಗಲಿಲ್ಲ ಆಗ ಅಪಂಚೀಕೃತ ಪಂಚಮಹಾಭೂತಗಳಿಂದ ಸಮಷ್ಟಿ ವ್ಯಷ್ಟಿರೂಪ ಸೂಕ್ಷ್ಮ ಸೃಷ್ಟಿವುಂಟಾಗಿ ಆಗ ಈಶ್ವರನ ಇಚ್ಛಾದಿಂದ ಯಾವಾಗ ಅವುಗಳ ಪಂಚೀಕರಣವಾಯಿತು. ಆದ್ದರಿಂದ ಸಮಷ್ಟಿ ವ್ಯಷ್ಟಿರೂಪ ಸ್ಥೂಲ ಸೃಷ್ಟಿಯಾಯಿತು ಇದರಲ್ಲಿ ಸಮಷ್ಟಿಸ್ಥೂಲ ಕಾರಣ ಪ್ರಪಂಚದ ಅಭಿಮಾನಿ ಜೀವನ ದೃಷ್ಟಿಯಿಂದ ಈಶ್ವರ ಇರುವನು ಮತ್ತು ವ್ಯಷ್ಟಿಸ್ಥೂಲ ಸೂಕ್ಷ್ಮ ಕಾರಣ ಪ್ರಪಂಚದ ಅಭಿಮಾನಿ ಜೀವನಿರುವನು ಇದರಲ್ಲಿ ಈಶ್ವರ ಸರ್ವಜ್ಞ ಇರುವದರಿಂದ ನಿತ್ಯ ಮುಕ್ತನಿರುವನು, ಮತ್ತು ಜೀವನು ಅಲ್ಪಜ್ಞ ಇರುವದರಿಂದ ಬದ್ದ ಇರುವನು, ಈ ರೀತಿಯಿಂದ ಶುದ್ಧ ಬ್ರಹ್ಮದಲ್ಲಿ ಪ್ರಪಂಚದ ಆರೋಪವಾಯಿತು.

ಆಧಾರ

೧) ಯನ್ನಿಷ್ಟತಯಾಯತ್‌ಸ್ಪುರತಿಸ - ತಸ್ಯ ಆಧಾರ ಃ (ಸಾಮಾನ್ಯ ರೂಪ ಆಧಾರ) ಯಾವದು ಇರುವದರಿಂದ ಯಾವದು ತೋರುವದೋ ಅದು ಅದಕ್ಕೆ ಆಧಾರ (ಸಂಕ್ಷೇಪ ಶಾರೀರಕಾರರು)

೨) (ವಿ.ಸಾ. ಅಂಕ ೧೪೯)ಸರ್ವ ಬ್ರಾಂತೀಮೆ ಸಾಮನ್ಯರೂಪ ಆಧಾರ ಕಹಿಯೆ ಹೈ। (ವಿಶೇಷರೂಪ ಅಧಿಷ್ಠಾನ ಕಹಿಯೆ ಹೈ)ಜೈಸೆ ಸರ್ಪಕಾ ಆಶ್ರಯ ಜೋ ಜೇವರಿ ತಾಕಾ ಸಾಮಾನ ಇದಂ ಸ್ವರೂಪ ಸರ್ಪಕಾ ಆಧಾರ ಹೈ.

JNANA SIMHASAN JNANAMANDIR
LIBRARY
Jangamawadi Math, Varanasi
Acc. No. 6946



೩) (ವಿ.ಚಂ. ಪೇಜ ೧೩೯) ಇದಂ ಪನಾ ಸಾಮಾನ್ಯ ಅಂಶ ಹೈ, ಯಾಕಾ ಆಧಾರ ಬೀಕ ಹೀಯೇ ಹೈ।

ಬ್ರಾಂತಿಕಾಲ ವಿಷೆ ಪ್ರತೀತಿ ಹೋವೆ ಹೈ ಸೋ ಬ್ರಾಂತೀಕೆ ಅಬಾವ ಕಾಲವಿಷೆ ಯಹ ಸೀಪಿ ಹೈ ಐಸಿ ಇದಂಪನಾಪ್ರ ತೀತಿ ಹೋವೆ ಹೈ ಯಾತೆ ಆಧಾರ ಹೈ।

ಬ್ರಾಂತಿ ನಿವೃತ್ತಿಕಾಲದಲ್ಲಿ ನಾನು ಸದ್ರೂಪ ನಿದ್ದೇನೆ ನಾನು ಚಿದ್ರೂಪ ನಿದ್ದೇನೆ ನಾನು ಆನಂದರೂಪ ನಿದ್ದೇನೆ ಆ ರೀತಿಯಿಂದ ಆತ್ಮನ ಸತ್ತಾಸ್ವರೂಪ ಪ್ರತೀತಿ ಯಾಗುವದು. ಆದ್ದರಿಂದ ಸದ್ರೂಪ ಸಾಮಾನ್ಯ ಅಂಶವಿರುವದು ಇದು ಆಧಾರವೆಂದು ಹೇಳುವರು.

(ವೃ.ಪ್ರ.ಪ್ರ. ೨ ಪೇಜ ೨೩೪) ಅಧ್ಯಸ್ಥಮೆ ಅಭಿನ್ನಹೋಯಕೆ ಜಾಕಾಸ್ಫುರಣ ಹೋವೆ ಸೋ ಆಧಾರ ಕಹಿಯೆ ಹೈ।

ಆನಂದ

೧) ಪರಮಪ್ರೀಯಾಸ್ಪದತ್ವಾತ್ ಆನಂದಃ

೨) (ವಿ.ಸಾ:ಅಂಕ ೩೬೪)ದುಃಖಸೆ ವಿಲಕ್ಷಣ ಮುಖ್ಯ ಪ್ರತೀತಿಕಾ ವಿಷಯ ಹೈಯಾತೆ ಆನಂದ ಕಹಿಯೆ ಹೈ।

೩) (ವಿ.ಚಂ.೧೭೦)ಸರ್ವ ಪ್ರೀತೀಕಾ ವಿಷಯ ಜೋ ಆನಂದ ರೂಪ ಹೈ (ಐಸೆ ಆತ್ಮಾ ಹೈ।)

೪) (ವಿ.ಚಿಂ.೧೭೦) ಪರಮ ಪ್ರೀತಿಗೆ ವಿಷಯ ವಹತನವೇ ಆನಂದರೂಪಮಕ್ಕುಂ

೫) (ಕೈವಲ್ಯ ೫-೯-೩)ಎಲ್ಲವ ನಾರೈದು ನೋಡಲಿಲ್ಲೆನಿಸಿದ ನೇಹವೆಲ್ಲಿನಿಲಿಸಿಹುದು ತನ್ನಲ್ಲಿ ಅದರಿಂದ ಸುಖ (ಆನಂದ).

ಆನಂದ(ಉಪಾದಿಕೃತ) ಬೇಧಗಳು

೧) ವಿಷಯಾನಂದ (ಕೈವಲ್ಯ ೫-೨೩-೧) ರಾಗ ವಿಷಯ ಸಿದ್ದಿಯಾಗೆ ಸಾತ್ವಿಕ ಬುದ್ಧಿ ಯೋಗದೊಡನೆ ಜೀವ ಭೋಗವೆನಿಸಿತೋರ್ಪ ಸುಖ॥

೨) (ವಿ.ಚಿಂ.೭೪) ವನಿತಾದಿ ವಿಷಯಾನುಭವದಲ್ಲಿ ತೋರ್ಪುದೇ ವಿಷಯಾನಂದ

೧) ಬ್ರಹ್ಮಾನಂದ : ಕೈವಲ್ಯ ೫-೨-೨೩-೨ ಖಡುನಿದ್ರೆಯೊಳು ಮತಿಯೆಡಗೆ ಮಾಯಾವೃತ್ತಿ॥ ಮಿಡಿದನಂತತೆಯನು ಪಡೆದು ರಾಜಿಪ ಸುಖ ।೨॥

೨) (ವಿ.ಚಿಂ.೭೪)ನಿದ್ರೆಯೊಳು ತೋರ್ಪುದೇ ಬ್ರಹ್ಮಾನಂದವೆನಿಸುವದು

೧) ವಾಸನಾನಂದ ತನಿನಿದ್ರೆಯಳಿದನ್ಯ ನೆನಹು ಜನಿಸದೆ ಸುಮ್ಮನೆ ನಿಂದ ವೇಳೆ ಯೊಳಿನಿದು ಕಾಣುವಚ್ಛ ಸುಖವೆ॥

೨) ವಿ.ಚಿಂ. ೭೪) ನಿದ್ರೆ ತಿಳಿದಾಕ್ಷಣ ತೋರ್ಪುದೇ ವಾಸನಾನಂದ.

೧) ಮುಖ್ಯಾನಂದ : (ಕೈ೫-೨೩-೫)ಹಾನೋಪಾದಾನವೆಂಬೇನು ವಿಲ್ಲದು ಪೇಕ್ಷೆಮಾನಸ ವೈದಲನೂನವಾದನುಪಮ ಸುಖವೇ (ಮುಖ್ಯಾನಂದ)

೧) ಯೋಗಾನಂದ : (ಕೈವಲ್ಯ ೫-೨೩-೫) ಮಾನಸದೊಳು ಬಾಹ್ಯವೇನು ತೋರದೆ ಪರಮಾನು ಸಂಧಾನ ಸಂತಾನದೊಳ ಪರೋಕ್ಷ॥೫॥ (ಸುಖವೇ ಯೋಗಾನಂದವು)

೨) (ವಿ.ಚಿಂ.೭೪) ಯೋಗಾಭ್ಯಾಸಬಲದಿಂ ಮನೋಲಯ ಮಾದಲ್ಲಿ ತೋರ್ಪುದೇ ನಿಜಾನಂದವೆನಿಸುವದು (ಯೋಗಾನಂದ)

೧) ಆತ್ಮಾನಂದ : (ಕೈವಲ್ಯ ೫-೨೩-೬) ಪ್ರಿಯವಾದ ವಿಷಯ ಸಂಚಯದೆಡೆಯೊಳುತಾನೆ। ಪ್ರಿಯತಮನೆಂದು ತಿಳಿಯೆ ತನಗವಿರಳ॥(ಸುಖವೇ) (ಆತ್ಮಾನಂದವು)

೨) (ವಿ.ಚಿಂ.೭೪) ಪ್ರಿಯವಾದ ವನಿತಾದಿವಿಷಯಂಗಳ ಮಧ್ಯದೊಳು ತಾನೇ ಪ್ರಿಯತಮನೆಂದು ಅರಿತಲ್ಲಿ ತೋರ್ಪುದೇ ಆತ್ಮಾನಂದವೆನಿಸುವದು.

೧) ಅದ್ವೈತಾನಂದ : (ಕೈವಲ್ಯ ೫-೨೩-೭) ಕನಸಿನಂತಿರೆ ಜಗವಿದು ಪುಸಿಯೆಂದು ತನ್ನನೆ ಬೇಧ ರಹಿತನೆಂಬನು ಭೂತಿಯೊಳು ಮಿಕ್ಕ॥ ಸುಖವೇ ಅದ್ವೈತಾನಂದವೆನಿಸುವದು.

೨) (ವಿ.ಚಿಂ.೭೪) ನಾಮರೂಪ ಪ್ರಪಂಚವೆಲ್ಲಂಮಿಥ್ಯೆ ತಾನೇ ಸತ್ಯ ವೆಂಬ ವಿವೇಕದಲ್ಲಿ ತೋರ್ಪುದೇ ಅದ್ವೈತಾನಂದವೆನಿಸುವದು.

೧) ವಿದ್ಯಾನಂದ : (ಕೈವಲ್ಯ ೫-೨೩-೮) ಪರಿಪೂರ್ಣ ಕಾಮತೆ ದೊರೆದ ಸಮಯದೊಳು॥ ಸರಿಯಾವುದಿಲ್ಲದೆ ಪತರತವಹ ಸತ್ಯ ॥ (ಸುಖವೇ ವಿದ್ಯಾನಂದವು)

೨) (ವಿ.ಚಿಂ.೭೪) ತತ್ವಮಸ್ಯಾದಿ ಮಹಾವಾಕ್ಯ ಜನಿತಮಾದ ಅಪರೋಕ್ಷ ಜ್ಞಾನದಲ್ಲಿ ತೋರ್ಪುದೇ ವಿದ್ಯಾನಂದ ಮಕ್ಕುಂ.

ವಿಶಯಾನಂದ

(ಪಂ.ದ.ಪ್ರ. ೧೧ ಶ್ಲೋ.೮೬) ವಿಷಯೆ ಷ್ವಪಿ ಲಬ್ಧೇಷು ತದಿಚ್ಛೋಪರಮೇಸತಿ ಅಂತರರ್ಮುಖ ಮನೋವೃತ್ತಾವಾನಂದಃ ಪ್ರತಿಬಿಂಬ॥

೮೬) ವಿಷಯ ವಸ್ತುಗಳು ದೊರತಾಗಲೂ ಅವುಗಳ ಬಯಕೆಯು ಅಡಗಿರುವಾಗ ಅಂತರ್ಮುಖವಾದಾಗ ಮನಸ್ಸಿನ ಸತ್ವವೃತ್ತಿಯಲ್ಲಿ ಸ್ವರೂಪಾನಂದವು ಪ್ರತಿಬಿಂಬಿಸುವುದು (ಇದು ವಿಷಯಾನಂದ)

(೮೭. ಶ್ಲೋಕ) ಬ್ರಹ್ಮಾನಂದೋವಾಸನಾ ಚ ಪ್ರತಿಬಿಂಬ ಇತಿತ್ರಯಮ್ ಅಂತರೇಣ ಜಗತ್ಯಸ್ಮಿನ್ನಾನಂದೋ ನಾಸ್ತಿಕಶ್ಚನ

೮೭॥ ಗಾಢನಿದ್ರೆಯಲ್ಲಿ ತೋರುವ ಬ್ರಹ್ಮಾನಂದ, ಸುಮ್ಮನಿರುವಾಗ ತೋರುವ ವಾಸನಂದ ಮತ್ತು ಅಂತರ್ಮುಖವಾದಮನೋವೃತ್ತಿಯಲ್ಲಿ ತೋರುವ ವಿಷಯಾನಂದ ಈ ಮೂರರ ಹೊರತು ಬೇರೆ ಆನಂದವೆಂಬುದು ಯಾವದೂ ಇಲ್ಲ.

ವಾಸನಾ ನಂದ

(ಶ್ಲೋಕ ೮೫) ಆಸ್ತಾಮೇತದ್ಯತ್ರಯತ್ರ ಸುಖಂ ಸ್ವಾದಿ ಯ್ಯೈರ್ವಿನಾ। ತತ್ರ ಸರ್ವತ್ರ ವಿದ್ದೇತಾಂ ಬ್ರಹ್ಮಾನಂದಸ್ಯ ವಾಸನಮ್

ಸುಮ್ಮನೆ ಇರುವ ಕಾಲದಲ್ಲಿ ಯಾವ ವಿಷಯವೂ ಇಲ್ಲದೆ .ಯಾವ ಸುಖವುಂಟಾಗುತ್ತದೆಯೋ ಈ ಕಾಲಗಳಲ್ಲೆಲ್ಲಾ ಬ್ರಹ್ಮಾನಂದದ ವಾಸನೆ ತೋರುವುದೆಂದು ತಿಳಿಯಬೇಕು.

ವಾಸನಾನಂದ ದೃಷ್ಟಾಂತ

(ಶ್ಲೋಕ ೯೭) ನೀರಪೂರಿತ ಭಾಂಡಸ್ಯ ಬಾಹ್ಯೇ ಶೈತ್ಯಂನ ತಜ್ಜಮ್ ಕಿಂತು ನೀರಗುಣಸ್ತೈನ ನೀರಸತ್ತಾನುಮೀಯತೆ

॥೯೭॥ ನೀರು ತುಂಬಿದ ಕೊಡದ ಹೊರಭಾಗದಲ್ಲಿ ಶೈತ್ಯವಿರುತ್ತದೆ ಅದು ನೀರಲ್ಲ ನೀರಿನ ಗುಣ ಅದರ ಶೀತಲತ್ವದಿಂದ ಒಳಗೆ ನೀರಿದೆಯೆಂದು ಊಹಿಸಬಹುದು(ಹೀಗೇಯೆ ವಾಸನಾನಂದ)

ಬ್ರಹ್ಮಾನಂದ

(ಶ್ಲೋಕ ೧೦೦) ನದ್ವೈತಂ ಭಾಸತೇ ನಾಪಿ ನಿದ್ರಾ ತತ್ರಾಸ್ತಿ ಯತ್ಸುಖಂಸ ಬ್ರಹ್ಮಾನಂದ ಇತ್ಯಾಹ ಭಗವಾರ್ಜುನಂ ಪ್ರತಿ

॥೧೦೦॥ ಯಾವಾಗ ದ್ವೈತ ಪ್ರಪಂಚ ತೋರುವದಲ್ಲಮೊ ಮತ್ತುನಿದ್ರೆಯು ಕೂಡ ಬರುವುದಿಲ್ಲಮೋ ಆಗ ಇರುವ ಸುಖವು ಬ್ರಹ್ಮಾನಂದವೆಂದು (ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ.)

ಆನಂ

ದ ಸ್ವರೂಪ ಆತ್ಮಾ

೧) ವಿ.ಸಾ. ಅಂಕ ೩೬೦ ರಿಂದ ೩೬೩ರವರೆಗೆ ಮತ್ತು

೨) ವಿ.ಸಾ.ಟಿ. ೪೦೭-೪೦೮-೪೦೯ರಲ್ಲಿ ನೋಡಬಹುದು

೩) (ಪ.ಭೋ.೩-೩-೬) ಸುಖವಲ್ಲದುದನೆಳ್ಳನಿ ನೊಲ್ಲನಾಗಿ ತತ್ಸುಖವನೆ ಕೂರ್ತತನಗೆ ತೋರ್ಪ ನಿಖಿಳವೆಲ್ಲಪ್ರೀತಿ ಕರಮಪ್ಪುವುದರಿಂದ ಆನಂದ ಸ್ವರೂಪನು.

೪) (ಪ.ಭೋ. ೪-೬-೪)ನಿರುಪಾದಿಕನು ನಿರಯವನು ನಿಸ್ಸಂಗ ನಿರಘ ನೆನಿಪ ನಿಜಾತ್ಮನು ತಾನು ಪೊರೆಯನೆಲ್ಲಿಯು ಯಾವತೆರದಿಂದೆ ನೋಯನೆಂದಿರೆ ಸುಖಪದವದು ತನಗಕ್ಕು.

ಆನಂದ ವಿಚಾರ

.(ವಿ.ಚಿಂ.೭೦) ಸಚ್ಚಿದಾನಂದಗಳಾ ಆತ್ಮಸ್ವರೂಪಮಾಗೆ ಸದ್ರೂಪ ಚಿದ್ರೂಪಗಳಂತೆ ಸರ್ವಬುದ್ಧಿವೃತ್ತಿಗಳಲ್ಲಿಯುಂ ಆನಂದ ಸ್ವರೂಪಕ್ಕ ಭಿವ್ಯಕ್ತಿಯುಂಟಾಗ ಬೇಕದಿಲ್ಲಾಗಿ ಆನಂದವು ಆತ್ಮಸ್ವರೂಪವಲ್ಲ ಎಂದೊಡೆತಥಾಪಿಃ ಉಷ್ಣಪ್ರಕಾಶ ರೂಪಮಾದ ದೀಪದ ಪ್ರಕಾಶವು ಗ್ರಹದಲ್ಲಿ ವ್ಯಾಪಿಸಲು ಉಷ್ಣ ವ್ಯಾಪ್ತವಾಗದು ಉದಕದಲ್ಲಿ ಉಷ್ಣವೇ ಪ್ರಕಟವಹುದು. ಪ್ರಕಾಶಕ್ಕೆ ಪ್ರಕಟತೆಯಾಗುವದು ಕಾಷ್ಟದಲ್ಲಿ ಉಷ್ಣ ಪ್ರಕಾಶ ವೆಂಬೆರಡಕ್ಕೆಯುಂ ತೋರ್ಕೆಯಪ್ಪಂತೆ ಪಾಷಾಣಂಗಳಲ್ಲಿ ಬ್ರಹ್ಮ ಸದ್ರೂಪಕಭಿವ್ಯಕ್ತಿಯ್ಯೆಸೆ ಚಿದಾನಂದ ಗಳಿಗ ಭಿವ್ಯಕ್ತಿಘಟಿಸದು.

ಬುದ್ದಿಯ ತಮೋಗುಣದಿಂದ ಅಜ್ಞಾನ ಮಯವಾದ ಮೂಢ ವೃತ್ತಿಯುಂದಿಂದ ರಜೋಗುಣ ರಾಗಮಯ ವಾದ ಘೋರ ವೃತ್ತಿಯಲ್ಲಿಯುಂ ಸಚ್ಚಿದ್ರೂಗಳೆರಡಕ್ಕೆ ಸ್ಪಷ್ಟತೆಯಲ್ಲದೆ ಆನಂದ ರೂಪಕ್ಕೆ ಸ್ಪಷ್ಟತೆ ದೊರಕೊಳ್ಳದು ಸತ್ವಗುಣದಿಂ ವೈರಾಗ್ಯಮಯವಾದ ಶಾಂತ ವೃತ್ತಿಯಲ್ಲಿ ಸಚ್ಚಿದಾನಂದ ವೆಂಬ ರೂಪತ್ರಯ ಮಕ್ಕುಂ ಸ್ಫುರಣಮುಪ್ಪದರಿಂದಾನಂದ ವಾತ್ಮಾಸ್ವರೂಪ ಮಕ್ಕುಂ

**ಆಶ್ರಯ**

೧) (ವಿ.ಚಂ. ೪೩೫) ಅಧಿಷ್ಟಾನಕ್ಕೆ ಆಶ್ರಯವೆನ್ನುತ್ತಾರೆ.

೨) ಆಸನ ನಿರ್ಗುಣ (ಪ.ಭೋ. ೫-೭-೧೦)ರತಿಯು ಮಾವಿರತಿಯು ಮಖಿಳ ವಿಷಯದೊಳತ್ಯತಿಶಯದಿಂದ ಮಿಲ್ಲೆನೆ ನೆರೆ ಕೆಟ್ಟು ಮತಿಯೋಳುದಾಸೀನ ಸ್ಥಿತಿಯಾಗಲಾಸನ ಗತಿಯದು ತಾನೆಂದು ತಿಳಿ ನೀರೆ.

(ಪ.ಭೋ.೫-೫-೨) ಹರನೆ ಸರ್ವಧಾರನೆಂಬುದಾಸನ

**ಆಸನಗಳ ಭಾಗ**

೧) ಸಿದ್ದಾಸನ (ಪ.ಭೋ.೫-೭-೨)ಎಡದ ಹಿಮ್ಮಡ ನಾಧಾರದೆಡೆಯನೊತ್ತುತ್ತೊಡನೆ ದಕ್ಷಿಣದ ಹಿಮ್ಮಡವನ್ನುಮಡಗಿ ಮೇಹನದ ಮೇಲ್ಗಡೆಯೊಳು ರುಜುವೆನಿಪೊಡಲಿಂದ ಮಿರೆ ಸಿದ್ದಾಸನವದು ।೨॥

ಎಡಗಾಲದ ಹಿಮ್ಮಡದಿಂದ ಗುದಗುಹ್ಯಗಳ ಮದ್ಯಸ್ಥಳವನ್ನೊತ್ತುತ್ತಿರಬೇಕು ಮತ್ತು ಬಲಗಡೆಯ ಕಾಲವನ್ನು ಶಿಶ್ನದ ಮೇಲೆ ಹೇರಬೇಕು ಆನಂತರ ಶರೀರವು ಚಲಿಸದಂತೆ ನೀಟಾಗಿ ಕುಳಿತು ಕೊಂಡಿರಲು ಅದು ಸಿದ್ದಾಸನವು.

**ಸ್ವಸ್ತಿಕಾಸನವು**

(ಪ್ರ.ಭೋ.೭-೪) ತೊಡೆ ಕಿರುದೊಡೆಗಳ ನಡುವೆ ರಡಂಗ್ರಿಗಳಡಗಿರ್ದು ಸಸಿನ ಮಾದೊಡಲಿಂದ. ಬಿಡದೆ ಕುಳ್ಳಿರೆ ಸ್ವಸ್ಥಿಕಾಸನ ವಹುದೆಂದು, ಮಡದಿ ನೀನಿದನುನಿಶ್ಚೈಪುದು

**ಪದ್ಮಾಸನ**

(ಪ.ಭೋ.೫೭೪) ತೊಡೆಗಳೆರೆಡರ ಮೇಲಡರಿ ಮಡಂಗಲು ಬಿಡದೆ ಕೂಡಿರಲೆಡ ಬಲನಾಗಿ ಕಡು ನೇರಿತ್ತಾದೊಡಲಿಂದೆ ಕುಳ್ಳಿರಲದೆ ಮಡದಿ ಪದ್ಮಾಸನವೆನಿಸುವದು.

ಅಂದರೆ ಎರಡು ತೊಡೆಗಳ ಮೇಲೆ ಎರಡು ಕಾಲುಗಳ ಹಿಮ್ಮಡಗಳು ಎಡದ್ದು ಬಲುಕಾಗಿಯು ಬಲದ್ದು ಎಡಕಾಗಿಯು ಹತ್ತಿಸಿ ಸರಳವಾದ ಶರೀರದಿಂದ ಕುಳಿತುಕೊಂಡಿರಲು ಇದು ಪದ್ಮಾಸನವೆಂದು ಹೇಳಿಸಿಕೊಳ್ಳುವದು.

**ವೀರಾಸನ**

ಎಡಪಾದದ ಮಡವಡಿಯಾಗಿ ನಿಲೆಬಲ। ದಡಿ ಮಡವೆಡದ ತೊಡೆಯ ಮೇಲೆ ॥ ಮಡಗಿರೆ ರುಜುಕಾಯದಿಂದೆ ಕುಳ್ಳಿರ್ದೊಡೆನುಡಿವರದನು ವಿರಾಸನವೆಂದು ।೩॥

ಅಂದರೆ ಎಡದ ಪಾದವನ್ನು ಮಡಚಿ ಅದರ ತುದಿಯನ್ನು ನೆಲಕ್ಕೆ ಊರಿ ಎಡದ

ತೊಡೆಯ ಮೇಲೆ ಬಲದ ಕಾಲನ್ನು ಹೇರಿ ಸರಳವಾದ ಶರೀರದಿಂದ ಕೂತುಕೊಂಡಿರಲು ಅದಕ್ಕೆ ವೀರಾಸನವೆಂದು ಹೇಳುವರು.

ಸುಖಾಸನ

(ಪ.ಭೋ.೫-೭-೫) ತನಾಗಾವ ತೆರದಿಂದ ಜನಿಪುದು। ಧೈರ್ಯವಂತವಾಗಿ ತನು। ಕುಳ್ಳಿರ್ದುಚಲಿಸದೆ॥ ಮನವಸುಗಳನ್ನು ನಿರೋಧಿಸಲದು ಸುಖಾ। ಸನವೆಂದು ತಿಳಿವುದು ನಳಿನಾಕ್ಷಿ

ಯಾವ ರೀತಿಯಿಂದ ಕುಳಿತುಕೊಂಡರೆ ಯೋಗಕ್ಕೂ ತನ್ನದ್ಯಾನಕ್ಕೂ ಅನೂಕುಲವಗುವದೋ ಹಾಗೆ ತಾನು ಕುಳಿತುಕೊಂಡು ಮನೋವಾಯು ದೃಷ್ಟಿಗಳನ್ನು ನಿಗ್ರಹಿಸಲು ಅದು ಸುಖಾಸನವಾಗುವದೆಂದು ತಿಳಿ.

ಆಸನ

(ವಿ.ಸಾ.ಅಂಕ ೪೮) ಆಸನ ಬೇಧಗಳು ಅನಂತವಿರುವವು ಅದರಲ್ಲಿ ೧)ಸ್ವಸ್ತಿಕಾಸನ ೨)ಗೋಮುಖಾಸನ ೩)ವಿರಾಸನ ೪)ಕೂರ್ಮಾಸನ ೫)ಪದ್ಮಾಸನ ೬)ಕುಕ್ಕುಟಾಸನ ೭)ಉತ್ತಾನಾಸನ ೮)ಕೂರ್ಮಕಾಸನ ೯)ಧನುಷಾಸನ ೧೦)ಮತ್ಸ್ಯ ಆಸನ ೧೧)ಪರ್ಶ್ವಮತಾ ನಾಸನ ೧೨)ಮೈಯೂರಾಸನ ೧೩) ಸಬಲಆಸನ ೧೪)ಸಿಂಹಾಸನ ೧೫)ಭದ್ರಾಸನ ೧೬)ಸಿದ್ಧಾಸನ ಇತ್ಯಾದಿ ಎಂಬತ್ನಾಲ್ಕು ಆಸನ ಯೋಗ ಗ್ರಂಥದಲ್ಲಿ ಬರೆದಿರುವದು ಇದರ ಲಕ್ಷಣವಾದರೂ ಅಲ್ಲಿ ಬರೆದಿರುವದು ಗ್ರಂಥದ ವಿಸ್ತಾರದಿಂದ ಅಥವಾ ವೇದಾಂತದಲ್ಲಿ ಅತ್ಯಂತ ಉಪಯೋಗವಿಲ್ಲ ಆದ್ದರಿಂದ ಲಕ್ಷಣ ಬರೆದಿಲ್ಲ ಇದರಲ್ಲಿಯಾದರೂ (೧)ಸಿಂಹಾಸನ ೨)ಭದ್ರಾಸನ ೩)ಪದ್ಮಾಸನ ಮತ್ತು ೪)ಸಿದ್ಧಾಸನ ಈ ನಾಲ್ಕು ಈಸನಗಳು ಪ್ರಧಾನವಿರುವವು. ಆ ನಾಲ್ಕರಲ್ಲಿಯಾದರೂ ಸಿದ್ಧಾಸನ ಅತ್ಯಂತ ಪ್ರಧಾನವಿರುವದು ಅದಕ್ಕೆ,

ಈ ಲಕ್ಷಣವಿರುವದು ವಾಮ ಪಾದದ ಹಿಮ್ಮಡವನ್ನು ಗುದಗುಹ್ಯಗಳ ಮಧ್ಯಸ್ಥಳವನ್ನು ಒತ್ತುತ್ತಿರಬೇಕು ದಕ್ಷಿಣಪಾದವನ್ನು ಶಿಶ್ನದ ಮೇಲೆ ಹೇರಬೇಕು, ಭ್ರುಕುಟಿಯಲ್ಲಿ ಅಂತರ ದೃಷ್ಟಿಯನ್ನಿಟ್ಟು ಕಂಬದಂತೆ ಸರಳ ನಿಶ್ಚಲ ಶರೀರದಿಂದ ಸ್ಥಿರವಾಗಿರುಸುವದಕ್ಕೆ ಸಿದ್ಧಾಸನವೆನ್ನುವರು. ಈ ಸಿದ್ಧಾಸನವೇ ಮುಖ್ಯವಿರುವದು ಏಕೆಂದರೆ ಕೆಲವು ಆಸನಗಳಾದರೂ ರೋಗನಾಶಕ್ಕೆ ಕಾರಣವಿರುವವು, ಮತ್ತು ಕೆಲವು ಆಸನಗಳು ಹೀಗೆ ಇರುವವು, ಮತ್ತು ಸಿದ್ಧಾಸನವು ಸಮಾಧಿಯ ಕಾಲದಲ್ಲಿ ಇರುವದು ಆದ್ದರಿಂದ ಅತಿ ಪ್ರಧಾನವಿರುವದು ಇದಕ್ಕೆ ವಜ್ರಾಸನೆ, ಮುಕ್ತಾಸನ ಮತ್ತು ಗುಪ್ತಾಸನವೆಂದು ಹೇಳುವರು.

ಆಕೃತಿ

ಆಕೃತಿ : (ವೃ.ಪ್ರ. ಪೇಜ ೪೮) ಅವಯವಕೆ ಸಂಯೋಗಕು ಆಕೃತಿ ಕಹೆ ಹೈ॥

ಆಚಾರ

(೧) ಸಮಯಾನು ಕೂಲ ವ್ಯಾಪಾರಂ ಆಚಾರಃ

